# ಅಂಕಣ

ನವೆಂಬರ್-ಡಿಸೆಂಬರ್ 1983

ಗಂಗಾಧರ ಚಿತ್ತಾಲರ ಕಾವ್ಯ: ಕೆಲವು ಟಿಪ್ಪಣಿಗಳು
ಡಾ|| ಕೆ. ವಿ. ನಾರಾಯಣ

ಚಿತ್ತಾಲರ 'ಹರಿವ ನೀರಿದು'-ಒಂದು ಭಾಷಿಕ ವಿವೇಚನೆ
ಕೃಷ್ಣ ಪರಮೇಶ್ವರ ಭಟ್ಟ

ದೇಹ, ಸೃಷ್ಟಿ ಮತ್ತು ಚಿತ್ತಾಲರ ಕಾವ್ಯ
ಡಾ|| ಬಸವರಾಜ ಕಲ್ಗುಡಿ

ಆಲೋಕ • ಟಿಪ್ಪಣಿಗಳು • ದಾಖಲೆ

# ಅಂಕಣ

ನವೆಂಬರ್–ಡಿಸೆಂಬರ್ 1983 ಸಂಪುಟ-5 ಸಂಚಿಕೆ-2

ಬೆಂಗಳೂರು 'ಕಾವ್ಯಮಂಡಲ' ಸಹಕಾರದಿಂದ ಕವಿ ಗಂಗಾಧರ ಚಿತ್ತಾಲರ ಕಾವ್ಯವನ್ನು ಕುರಿತ ವಿಶೇಷ ಸಂಚಿಕೆಯನ್ನು ಪ್ರಕಟಿಸುತ್ತಿದ್ದೇವೆ. ನಮ್ಮ ಓದುಗರು ಇದನ್ನು ಸಂತೋಷದಿಂದ ಸ್ವಾಗತಿಸುವರೆಂದು ತಿಳಿಯುತ್ತೇವೆ. ಆದ್ದರಿಂದ ಸ್ವಲ್ಪ ತಡವಾಯಿತು. ಸಹಕರಿಸಿ.

ಡಾ|| ಚಂದ್ರಶೇಖರ ಕಂಬಾರರಿಗೆ ಕೇಂದ್ರ ನಾಟಕ ಅಕಾಡೆಮಿ ಮತ್ತು ಶ್ರೀ ಯಶವಂತ ಚಿತ್ತಾಲ 'ಕಥೆಯಾದಳು ಹುಡುಗಿ' ಕಥಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಇಬ್ಬರಿಗೂ 'ಅಂಕಣ'ದ ಅಭಿನಂದನೆಗಳು.

ಕೊರವಂಜಿಯ 'ರಾಶಿ' ಮತ್ತು 'ಹಚ್ಚೇವು ಕನ್ನಡದ ದೀಪ'ದ ಡಾ|| ಡಿ. ಎಸ್. ಕರ್ಕಿ ನಿಧನರಾಗಿದ್ದಾರೆ. ಇವರ ನಿಧನಕ್ಕೆ 'ಅಂಕಣ' ಸಂತಾಪವನ್ನು ಸೂಚಿಸುತ್ತದೆ. ಇವರ ಸಾಹಿತ್ಯ ಕೃಷಿಯಿಂದ ಕನ್ನಡ ಶ್ರೀಮಂತವಾಗಿದೆ. ಇವರಿಗೆ 'ಅಂಕಣ'ದ ನಮನ.

–ಅಂಕಣ

8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003

## ಈ ಸಂಚಿಕೆಯಲ್ಲಿ

### ಲೇಖನಗಳು

ಗಂಗಾಧರ ಚಿತ್ತಾಲರ ಕಾವ್ಯ: ಕೆಲವು ಟಿಪ್ಪಣಿಗಳು /1/ ಡಾ|| ಕೆ. ವಿ. ನಾರಾಯಣ
ಚಿತ್ತಾಲರ 'ಹರಿವ ನೀರಿದು'–ಒಂದು ಭಾಷಿಕ ವಿವೇಚನೆ /9/ ಕೃಷ್ಣ ಪರಮೇಶ್ವರ ಭಟ್ಟ
ದೇಹ, ಸೃಷ್ಟಿ ಮತ್ತು ಚಿತ್ತಾಲರ ಕಾವ್ಯ /17/ ಡಾ|| ಬಸವರಾಜ ಕಲ್ಗುಡಿ

### ಆಲೋಕ

'ಅಂಕಣ'ದ ಲೇಖನಕ್ಕೆ 'ಪಡಿಗಳ್' ಪ್ರತಿಕ್ರಿಯೆ /27/

### ಟಿಪ್ಪಣಿಗಳು

"ರತ್ನನ ಪದಗಳು", ಕೈಲಾಸಂ, ಪೂರ್ಣಿಮಾ, ತರಂಗ...ಇತ್ಯಾದಿ /30/ ಚಿ. ಶ್ರೀನಿವಾಸರಾಜು

### ದಾಖಲೆ

ಪ್ರಕಟಣೆ : 'ಪಿ.ಪಿ' ಬಳಗದ ಗೆಳೆಯರಿಂದ
ವಾರ್ಷಿಕ ಚಂದಾ : ಹತ್ತು ರೂಪಾಯಿ
'ಅಂಕಣ' ಸ್ಥಾಯಿನಿಧಿ : ನೂರು ರೂಪಾಯಿ

# ಗಂಗಾಧರ ಚಿತ್ತಾಲರ ಕಾವ್ಯ : ಕೆಲವು ಟಿಪ್ಪಣಿಗಳು

ಡಾ|| ಕೆ. ವಿ. ನಾರಾಯಣ

ಇದು ಎಂಥ ಹಾಡು
ಮನುವಂಶ ಪಟ್ಟಹ ಪಾಡನೆಲ್ಲ ಹೊತ್ತಿಸಿ ನಮ್ಮ
ಮರವಟ್ಟ ಮನಗಳಲ್ಲಿ ಉರಿಯಂತೆ ಕಾಡುವುದು —ಇಂಥ ಹಾಡು

ಗಂಗಾಧರ ಚಿತ್ತಾಲರ ಕವಿತೆಯ ಈ ಸಾಲುಗಳು ಓದುಗನೊಬ್ಬನಿಂದ ಕಾವ್ಯ ಎಂಥ ಪ್ರತಿಕ್ರಿಯೆಯನ್ನು ಪಡೆಯಬೇಕೆಂಬುದನ್ನು ಹೇಳುತ್ತವೆ. ಅವರ ನಲವತ್ತು ವರ್ಷಗಳ ಕಾವ್ಯಕೃಷಿಯನ್ನು ಓದುವಾಗ ನಮ್ಮಲ್ಲಿ ಈ ಪ್ರತಿಕ್ರಿಯೆ ಸಹಜವಾಗಿಯೇ ಮೂಡುತ್ತದೆ. ಈ ಅರ್ಥದಲ್ಲಿ ಚಿತ್ತಾಲರು ಸಫಲಕವಿ. ಇನ್ನೊಂದು ಕಡೆ ಚಿತ್ತಾಲರೇ ಹೀಗೆ ಬರೆಯುತ್ತಾರೆ.

ಈ ಮುಖೋದ್ಗತ ನಿನ್ನ ಹೃದ್ಗತವೇ ಆದ ದಿನ
ಸುದಿನ
ಅವರೆಗು ಇದು
ತಕ್ಕ ಮಣ್ಣಿನ ತೇವಕಾಗಿ ಕಾದೇ ಇರುವ
ಬೀಜ —ಕವನ

ಈ ಮಾತು ಕವಿ ಸಹೃದಯನಲ್ಲಿ ಮಂಡಿಸುತ್ತಿರುವ ನಿಲುವು. ಕವಿತೆ ಎಂಬುದು 'ಸಫಲ' ವಾಗುವುದು ಓದುಗನಲ್ಲಿ, ಅಲ್ಲಿಯವರೆಗೆ ಅದು 'ಬೀಜ'. ಈ ಎರಡೂ ಉಲ್ಲೇಖಗಳು ಯಾವುದೇ ಕವಿಗೂ ಅನ್ವಯಿಸಬಹುದಾದ ಮಾತುಗಳಾದರೂ, ಈ ಸಂದರ್ಭವನ್ನು ಚಿತ್ತಾಲರ ಕಾವ್ಯ ಸಂದರ್ಭಕ್ಕೆ ವಿಶೇಷವಾಗಿ ಅನ್ವಯಿಸಿ ನೋಡಲೆಂದು ಈ ಮುಂದಿನ ಸಾಲುಗಳನ್ನು ಬರೆಯಲಾಗಿದೆ.

ಚಿತ್ತಾಲರನ್ನು 'ಚಿಂತನಶೀಲ ಕವಿ', 'ಮಾನವತಾವಾದಿ' ಎಂದೆಲ್ಲ ವಿಮರ್ಶಕರು ಗುರುತಿಸಿದ್ದಾರೆ. ಹಾಗೆ ನೋಡಿದರೆ ಈ ಮಾತುಗಳು ನಮಗೆ ಏನನ್ನೂ ಹೇಳಲಾರವು. 'ಕಾಲದ ಕರೆ'ಯಿಂದ 'ಸಂಪರ್ಕ'ದ ವರೆಗೆ ಅವರ ಕವಿತೆಗಳನ್ನು ಓದುತ್ತಿದ್ದಂತೆ ನಮಗೆ ಅವರನ್ನು ಹೀಗೆ ತಾತ್ತ್ವಿಕವಾದ ಚೌಕಟ್ಟಿನೊಳಗೆ ಇಡಲು ಆಗದೆಂಬ ಮಾತು ಸ್ಪಷ್ಟವಾಗುತ್ತದೆ. ಈ ಕವಿಯ ಕಾವ್ಯದ ಬೆಳವಣಿಗೆಯ ಹಿಂದಿನ ಸೂತ್ರ : 'ಚರಿತ್ರೆಯೆಂದು ಹಾಡಿದ ಗೀತ ಆತ್ಮಚರಿತ್ರೆಯಾಗಿ ವೇಧಿಸಿ'ರುವುದು. ಅನುಭವಗಳನ್ನು ಕಂಡು, ಗ್ರಹಿಸಿ, ಮಥಿಸಿ ಹಲವೊಮ್ಮೆ ತಾದಾತ್ಮ್ಯಭಾವದಿಂದ ಕವಿತೆ ರಚಿಸುವ ಒಂದು ಹಂತದಿಂದ, ಯಾವುದು ಕೇವಲ ಗ್ರಹಿಕೆಯಾಗಿತ್ತೋ ಅದು ತನ್ನಲ್ಲೇ ಇದ್ದು "ಮೈಮುರಿದು ನಿದ್ದೆ ತಿಳಿದೇಳ್ವ" ಬಗೆಯನ್ನು ಕಂಡುಕೊಳ್ಳುವ ಹಂತದವರೆಗೆ ಈ ಕವಿ ಹಾದು ಬಂದಿದ್ದಾರೆ. 'ಮನುಕುಲದ ಹಾಡು' ತನ್ನ ಒಳಗಿನಿಂದಲೇ

ಮೂಡುತ್ತಿರುವುದನ್ನು, ಅದು ತನ್ನ ಮೂಲಕವೇ ಪ್ರಕಟಗೊಳ್ಳುತ್ತಿರುವುದನ್ನು ಈ ಕವಿ ಅನುಭವಿಸಿದ್ದಾರೆ.

ಯಾವುದು 'ಕಣ್ಣು'ಗಳ ಮೂಲಕ ನಿಜವಾಗಿತ್ತೊ, ಆಗ ಹುಟ್ಟುವ ಕವಿತೆಗಳಿಗೂ, ಅದೇ ಒಳಗೇ ಮೈ ತಳೆದಾಗ ಹುಟ್ಟುವ ಕವಿತೆಗಳಿಗೂ ಸ್ಪಷ್ಟವಾದ ವ್ಯತ್ಯಾಸಗಳಿವೆ. ಈ ವ್ಯತ್ಯಾಸವನ್ನು ಮೊದಲು ಗುರುತಿಸುವ. ಅನಂತರ ಈ ಮೂಲಕ ಕೆಲವು ಅನಿಸಿಕೆಗಳನ್ನು ತಲುಪಬಹುದಾಗಿದೆ.

ಸೃಷ್ಟಿಗೋಲವನಳೆಯೆ ಕಣ್ಣಗೋಲವೇ ಬೇಕು
ಕೇಂದ್ರದಲಿ ಆದ ಹಿಡಿಯೆ ಕಣ್ಣಿನಾಲಿಯೆ ಬೇಕು
ಕಣ್ಣರಳಿದಾಗ ಅಕ ಸ್ಫೂರ್ತಿಗೊಂಡು ಅಲಲ
ಮೂರ್ತಿಗೊಂಡು ತುಂಬಿ ಪೂರ್ತಿಗೊಂಡು
ನಳನಳಿಸುವುದು ಸೃಷ್ಟಿ —ಕಣ್ಣು

ಜೊತೆಗೆ ಈ ಸಾಲುಗಳನ್ನೂ ನೋಡಿ :

ಈ ಪೆಡಂಭೂತವನ್ನು
ನನ್ನದೇ ವಿರೂಪವನ್ನು
ನನ್ನದೇ ಕುರೂಪವನ್ನು
ಯಾವ ಕಣ್ಣಿಂದ ನೋಡಲಿ ? —ಲಕ್ಷಣಗಳು

ಇಲ್ಲಿ 'ಕಣ್ಣು' ಇಂದ್ರಿಯಾನುಭವಗಳ ಮಾಧ್ಯಮವಾಗಿರುವ ದೇಹವನ್ನು ಕುರಿತಿದೆ. ಯಾವುದನ್ನು ದೇಹದ ಮೂಲಕ ಗ್ರಹಿಸಬೇಕಿತ್ತೊ, ಅದನ್ನೇ ದೇಹವು ಅನುಭವಿಸುವ ಪರಿಸ್ಥಿತಿ ಇಲ್ಲಿ ಸ್ಪಷ್ಟಗೊಂಡಿದೆ. ಈ ಪರಿವರ್ತನೆಯನ್ನು ಬೌದ್ಧಿಕವಾಗಿ ಗ್ರಹಿಸಿದ ಕವಿತೆಗಳನ್ನು ಚಿತ್ತಾಲರು ಹಿಂದೆಯೇ ಬರೆದಿದ್ದಾರೆ. 'ಮಾನವ' (1954)ದ ಈ ಸಾಲುಗಳನ್ನು ನೋಡಿ :

ನಾನೆ ವೇಧವ್ಯಗ್ರ ವ್ಯಾಧನಾದೆ
ನಾನೆ ಖರಶರವಿದ್ಧ ಹರಿಣವಾದೆ
ಅಲ್ಲಿ ಕಾದಿಹುದು ಬಲಿ
ಅಲ್ಲಿ ಯಾಜಿಯೂ ನಾನೇ ಯಜ್ಞಪಶುವೂ ನಾನೆ

ಈ ಪರಿವರ್ತನೆಯನ್ನು ಒಂದೆಡೆಗೆ ದಾಖಲಿಸುವ 'ವಿಧಿ' ಕವಿತೆಯನ್ನು ನೋಡಿ : ಇದರ ಮೊದಲ ಭಾಗವನ್ನು 1948ರಲ್ಲಿ, ಎರಡನೆಯ ಭಾಗವನ್ನು 1960ರಲ್ಲಿ ಬರೆದಿದ್ದಾರೆ.

ಆವ ವಜ್ರಾಘಾತ
ಕುಡುಗೀತು ನನ್ನ ಮುಂಗೈಯ ಕಸುವು ?

ನಾನೇ ನನ್ನ ವಿಧಾತ ಎಂಬ ನಿಲುವಿನ ಸಾಲುಗಳಿವು.

ತತ್ತರಿಸುವ ಕೈಯು ಇಗೋ, ನೆತ್ತರೊಡೆದ ಮೈಯು ಇಗೋ
ಮರೆಯೊಳಿಂದ ಬರುವ ವ್ಯಾಧ 'ಮಾ ನಿಷಾಧ ಮಾ ನಿಷಾಧ'
ವೆಂದರೂನು ಉರುಳದಿಹುದೆ ಚೆಲ್ಲಾಡುವ ಪಕ್ಷಿ ?
ತತ್ತರಿಸುವ ಕೈಯು ಇಗೋ

ಈ ಪರಿವರ್ತನೆ ಉಂಟುಮಾಡುವ ಗತಿತರ್ಕ ಗಮನಾರ್ಹವಾಗುತ್ತದೆ. ಅದನ್ನು ಮಂಡಿಸುವ ಅವರ ಕಾವ್ಯದ ಕೆಲವು ಭಾಗಗಳನ್ನು ನೋಡಬಹುದು.

ವರುಣ (1952) ಈ ಕವಿತೆಯಲ್ಲಿ ಸಮುದ್ರದ ಎದುರು ನಿಂತು ಹೇಳುವ ಮಾತುಗಳಿವು.

ಅಣುವಾದರೇನಂತೆ ನೀನು
ನಿನ್ನ ಸಹೋದರನಿವನು ಕಾಣಯ್ಯಾ
ನಿನ್ನಲ್ಲು ಬೇರುಬಿಟ್ಟಿದೆ ಈ ಪ್ರಾಚೀನತೆ
ನಿನ್ನಲ್ಲು ಬಿತ್ತವಾಗಿ ನೆಲಸಿವೆ
ಈ ದುರ್ದಮ್ಯ ಬಲ, ಉತ್ತುಂಗ ಉತ್ಸಾಹ, ಉಕ್ಕುಂಡ
ಬಂಧನವಿದ್ದರೂ ಬಂಧನವಿರದ
ಈ ಅದಮ್ಯ ಜೀವನವನ್ನು ಉಸಿರಾಡಿಸಿ
ಅನಿರುದ್ಧನಾಗು

ಬೆಳಗು (1953) ಕವಿತೆಯ ಈ ಸಾಲುಗಳು :

ಈ ಗಂಧರ್ವ ಸಂತತಿಯನ್ನು—ಈ ಕುಸುಮಸಂಕುಲವನ್ನು ಕಂಡಿರಾ
ತಮ್ಮ ಹೃದ್ಗಂಧವನ್ನು ಮೃದ್ಗಂಧದೊಡನೆ ಬೆರಸಿ ನಿಂತಿವೆ
ನಿಮ್ಮ ಹೃದ್ಗಂಧವೂ ಹೊರಸೂಸಲಿ
ಜಡರಾಗಬೇಡಿ ಬಧಿರರಾಗಬೇಡಿ
ಈ ಬೆಳಗು ನಿಮ್ಮ ರುಧಿರದಲ್ಲಿ ಅಭಿಸರಿಸಲಿ

ವ್ಯಕ್ತಿಚೈತನ್ಯವನ್ನು ಲೋಕಚೈತನ್ಯದೊಡನೆ ಬೆರೆಸುವಲ್ಲಿ ಜೀವನದ ಸಾಫಲ್ಯವಿದೆ ಎಂಬ ತಾತ್ವಿಕ ನಿಲುವು ಈ ಕವಿತೆಗಳಲ್ಲಿವೆ. ಆದರೆ ನಡುವಣ ಗೋಡೆ ಕೂಡ 'ದೇಹ'

(1) ದೇಹ ಮಾಧ್ಯಮವಾಗದೇ ಹೋದರೆ ಲೋಕ ಗ್ರಹಿಕೆಗೆ ಬರದು

ನಾದ—ರಸ—ರುಚಿ—ಗಂಧ—ಸ್ಪರ್ಶಗಳ ಲೋಕವಿದು
ಬಾಳತೊಂಗೆಗೆ ಅಂಟಿಕೊಂಡ ಜೀವದ ಹೂವು
ತೊಟ್ಟು ಕಳಚುವ ತನಕ
ಇಲ್ಲಿಯೊಂದೊಂದು ರುಚಿಯೂ ಆಪ್ಯಾಯಮಾನ
ನಡೆ, ಇದರ ರಸ ಹೀರು —ಉದಯನನ್ನು ಕುರಿತು (1955)

ಅಲ್ಲದೆ 'ದೇಹ' ಅಭಿವ್ಯಕ್ತಿಯ ಮಾಧ್ಯಮ ಕೂಡ ಹೌದು ('ಕವನ' ಕವಿತೆಯ ಮುಖೋದ್ಗತವೆಂಬ ಮಾತನ್ನು ನೆನೆಯಬಹುದು) ತತ್ತರಿಸುವ ಕೈಯ ಚಿತ್ರದಲ್ಲಿ ಅಭಿವ್ಯಕ್ತಿ ಮಾಧ್ಯಮವಾಗಿ ದೇಹ ಸೋಲುತ್ತಿರುವುದನ್ನು ಕವಿ ಕಾಣುತ್ತಿದ್ದಾರೆ.

(2) ಸುಕ್ಕುಗಟ್ಟಿವೆ ಸ್ನಾಯು ತುಕ್ಕು ಹಿಡಿದಿದೆ ಗ್ರಂಥಿ
ಒಸರದಿದೆ ಒಂದಿನಿಸು ಬಯಸಿ ಮನವು — ನೀರಡಿಕೆ (1958)

ಜೀವಕ್ಕೆ ಬಿಗಿವ ಘಟಸರ್ಪವಾಯಿತು ದೇಹ — ದುಃಖಗೀತ (1960)

ದೇಹ ಏಕಕಾಲಕ್ಕೆ ಲೋಕ ಚೈತನ್ಯದೊಡನೆ 'ಸಂಪರ್ಕ' ಬೆಳೆಸುವ ಮಾಧ್ಯಮವೂ ಹೌದು. ಆ 'ಸಂಪರ್ಕ'ವನ್ನು ಕಡಿದು ಹಾಕುವ ಗೋಡೆಯೂ ಆಗಿರುವುದನ್ನು ಈ ಕವಿ ತನ್ನ ಕಾವ್ಯದಲ್ಲಿ ಅತ್ಯಂತ ಬಲವಾಗಿ ಮಂಡಿಸಿದ್ದಾರೆ. (ಇದು ಆನುಷಂಗಿಕವಾಗಿ ಕಾವ್ಯ ಮತ್ತು ಭಾಷೆಯ ಸಮಸ್ಯೆ ಕೂಡ ಆಗಿದೆ. ಆದರೆ ಇಲ್ಲಿ ಅದು ಅಷ್ಟು ಮುಖ್ಯವಾದುದಲ್ಲ). ಈ ವೈರುದ್ಯದ ತಾರ್ಕಿಕ ಕೊನೆ 'ದೇಹದಿಂದ ಬಿಡುಗಡೆ'. 'ದುಃಖ ಗೀತ'ದಲ್ಲಿ ಘಟನೆಯೊಂದರಲ್ಲಿ ಈ ಅರ್ಥ ಕವಿ ಕಾಣಲು ಯತ್ನಿಸಿದ್ದಾರೆ.

ಕಣ್ಗಳ ಮುಚ್ಚಿ
ಗತ ಜೀವಿತವ ಕಳಚಿದರಿವೆಯೊಲು ತೆರೆದಿಟ್ಟು
'ನೀ ಕೊಟ್ಟ ಇದ, ನೀ ಕೊಟ್ಟ ಇದ ಮತ್ತೆ ನೀನೆ ಇದ ಮರಳಿ ಕೋ'
ಎಂದು ಜೀವಾಧಾರನಿಗೆ ಬಾಗಿ ಪೊರಮಟ್ಟು
—ಸುಡುವ ಗೂಢವನು ಕೆಂಡದೊಲು ಹೊತ್ತು.

ಸಮಸ್ಯೆಯ ಪರಿಹಾರ ಇಷ್ಟು ಸುಲಭವಾದುದಲ್ಲ. ಏಕೆಂದರೆ ಬಿಡುಗಡೆಯ ಸಂದರ್ಭದಲ್ಲೂ 'ಸುಡುವ' ಗೂಢ ಕೆಂಡದಂತೆ ಮಡಿಲಿನಲ್ಲಿ ಇದ್ದೇ ಇದೆ.

ಈ ಸಮಸ್ಯೆಗೆ ಇನ್ನೆರಡು ಅಂಚುಗಳು ಬಂದು ಸೇರಿ ಕೊಳ್ಳುತ್ತವೆ.

(1) ಮೊದಲೇ ಹೇಳಿದಂತೆ ಈ ಅರಿವು ಹೊರಗಿನಿಂದ ಬರುತ್ತಿದ್ದುದು ಈಗ ತನ್ನಲ್ಲೇ ಹುಟ್ಟಿ ಬೆಳೆಯುತ್ತಿದೆ ಎಂಬುದನ್ನು ಕವಿ ಮಂಡಿಸುತ್ತಾರೆ. ವಿಚಿತ್ರವೆಂದರೆ 'ದುಃಖಗೀತ' ಕವಿತೆಯಲ್ಲಿ ತಂದೆಯ ಮನಸ್ಸಿನ ಭಾವಗಳನ್ನು ಕವಿ ತಾನೇ ಕವಿತೆಯ ನಾಯಕನಾಗಿ ಆರೋಪಿಸಿಕೊಳ್ಳುವ ಭಂಗಿಯಿದೆ. ಇದರಿಂದ ಕವಿತೆಯಲ್ಲಿ ಆಗಾಗ ಅಪೂರ್ವವಾದ ನಾಟಕೀಯತೆ ಕೂಡ ಮೂಡಿ ಬಂದಿದೆ. ಉದ್ಗಾರವಾಚಿಯಾಗಿ 'ಆಹ' 'ಆಹಹ' 'ಆರರೆ' 'ಅಲಲಾ' ಮುಂತಾದ ಮಾತುಗಳನ್ನು ಅಲ್ಲಿ ಜೋಡಿಸುವ ಕ್ರಮವನ್ನು ನೋಡಬಹುದು. ಅಲ್ಲದೆ ಕನ್ನಡ ಭಾಷೆಯ ಒಂದು ಸಾಧ್ಯತೆ ಅಚಾನಕವಾಗಿ ಈ ಅರ್ಥವನ್ನು ಬಲಪಡಿಸುವ ಬಗೆಯಲ್ಲಿ ಈ ಕವಿತೆಯೊಳಗೆ ಮೈಗೂಡಿದೆ. ಕವಿತೆಯಲ್ಲಿ ಮಧ್ಯಮ ಪುರುಷ ಭೂತ ಏಕ ವಚನ ಕ್ರಿಯಾ ರೂಪವೇ ಪ್ರಥಮ ಪುರುಷಕ್ಕೂ ಅದೇ ರೂಪದಲ್ಲಿ ಬಳಕೆಯಾಗುವ ಬಗೆ ಬೇರೆಯದೇ ಆದ ಅರ್ಥಗಳನ್ನು ಪಡೆದುಕೊಳ್ಳುತ್ತದೆ. ನೋಡಿ :

ದಿಕ್ಕುಗಾಣದೆ ನಿಂದೆ ದಿಕ್ಕುಗಾಣದೆ ನಿಂದೆ
ದೇವರೆ ಎಂದೆ, ದುರ್ದೈವವೇ ಎಂದೆ
ಪೂರ್ವ ಸಂಚಿತವೆಂದೆ, ಇಹವು ಪಂಚಿಸಿತೆಂದೆ,

(2) ಈ ವೈರುಧ್ಯದ ಅರಿವಿನೊಡನೆ ಬರುವ ಮತ್ತೊಂದು ಅರಿವೆಂದರೆ ಈ ಸನ್ನಿವೇಶದಲ್ಲಿ ವ್ಯಕ್ತಿಯ ಅಸಹಾಯಕತೆ. ಇದನ್ನು ಹೊರಗಿನಿಂದ ಕವಿ ಗ್ರಹಿಸಿದ್ದರು.

ಹುಟ್ಟನಿಂದಲೆ ಇರವಿಗೆ ನಮ್ಮನ್ನು ಕಟ್ಟಿ ಹಿಡಿದ ಬಂಧ
ಅಹ ಬೀಜದಲೆ ಪೂರ್ವಲಿಖಿತದೊಲು
ಪ್ರಸುಪ್ತ ಗುಣಸಂಭಾರ
ಜಗದ ಕಂಭಗಳನಲುಗಿಸಿ ಕುರುಡು ಭೀತಿಯಲಿ
ಹೆಸರಿಲ್ಲದಂಥ ಗೋಳನು ಹುಯ್ದು ಹಲುಬಿದಿರಿ
ಬೊಕ್ಕ ಬೋರಲು ಬಿದ್ದ ಬಾನಿನೆಡೆ. ಋಷಿ

ಆದರೆ ಈ ಅರಿವು ಈ ತನ್ನ ಒಳಗಿನಿಂದಲೇ ಮೂಡಿ ಬರುತ್ತಿದೆ.

ನೆಲ ಬಾನುಗಳ ನಿರರ್ಥಕ ತೆಕ್ಕೆಯಲ್ಲಿ
ಸಿಕ್ಕು ಬಿದ್ದಿದ್ದೇನೆ. ಕೊನೆಯು ಎಂದು ಗೂಢ

ಸುತ್ತುವರಿದಿವೆ ನಿರುತ್ತರವಾಗಿ
ನಿರ್ವಿಕಾರ ಮುದ್ರೆಯ ತಳೆದು
ನೆಲ ಬಾನು ಉದ್ವಿಗ್ನ

ದೇಹದ ಈ ಇಬ್ಬಂದಿತನದ ಅರಿವು, ಹಾಗೂ ಅದರ ತರ್ಕಬದ್ಧವಾದ ಬೆಳವಣಿಗೆಯನ್ನು ಗಮನಿಸಿ ಶಾಂತಿನಾಥ ದೇಸಾಯಿಯವರು ಚಿತ್ತಾಲರಲ್ಲಿ ಅಸ್ತಿತ್ವವಾದಿ ಚಿಂತನೆಗಳ ಹೊಳಹುಗಳನ್ನು ಗುರುತಿಸಿದ್ದಾರು. ಆದರೆ ಮೊದಲೇ ಹೇಳಿದಂತೆ ಗೂಢಗಳಿಗೆ ಉತ್ತರವನ್ನು ದೇಹ ನಿರಾಕರಣೆಯಲ್ಲಿ ಕಾಣುವುದು ಸಾಧ್ಯವಿಲ್ಲವೆಂಬ ಗಟ್ಟಿ ನಿಲುವಿನ ಕವಿ ಇವರು. 'ಹೆಳವನ ಮಾಡದಿರಯ್ಯಾ ತಂದೆ ಹೆಳವನ ಮಾಡದಿರೋ' ಎಂದು ಅಹವಾಲನ್ನು ಮಂಡಿಸುವುದಷ್ಟು ಬಿಟ್ಟರೆ ಬೇರೇನೂ ಸ್ವಾತಂತ್ರ್ಯವನ್ನು ವ್ಯಕ್ತಿ ಇಲ್ಲಿ ಕಾಣುತ್ತಿಲ್ಲ ಆದರೆ 'ಹಾವ ಭಾವ ಪರಿಪೂರ್ಣ ಹಸನ್ಮುಖ' 'ಮುಖವಾಡ ತೊಟ್ಟಂತೆ ಹಾವಭಾವಗಳ ಕಳಕೊಂಡ ಮೋರೆ'ಯಾಗುವುದನ್ನು ತಪ್ಪಿಸಲಾರ.

ಯಾರಾದರೂ ಇಂತಹ ಪರಿಸ್ಥಿತಿಯಲ್ಲಿ ಅತ್ಯಂತ ನಿರಾಶೆಯ, ಪಲಾಯನದ ಕವಿತೆಗಳನ್ನು ಬರೆಯುವುದು ಮಾತ್ರ ಸಾಧ್ಯವೆಂಬ ತಾರ್ಕಿಕ ನಿಲುವನ್ನು ನಾವು ತಲುಪಿ ಬಿಡಬಹುದು. ಹಾಗೆ ನೋಡಿದರೆ ಕವಿತೆಯ ರಚನೆಯೇ ಇಂಥ ನಿರರ್ಥಕತೆಯನ್ನು ಮೀರಿ ನಿಲ್ಲುವ ಯತ್ನವಾಗುತ್ತದೆ. ಅದನ್ನು ಮುಂದೆ ವಿವರಿಸುತ್ತೇನೆ. ಆದರೆ ಚಿತ್ತಾಲರು ಈ ತಾರ್ಕಿಕ ನಿಲುವನ್ನು ತಲುಪಿಲ್ಲವೆಂಬುದೇ ಅವರ ಹೆಚ್ಚುಗಾರಿಕೆಯಾಗಿದೆ. ಇದನ್ನು ಅನಂತಮೂರ್ತಿ, ದೇಸಾಯಿ, ಕುರ್ತಕೋಟಿ ಮೊದಲಾಗಿ ಎಲ್ಲ ವಿಮರ್ಶಕರೂ ಗುರುತಿಸಿ

ದ್ದಾರೆ. ಧೀರೋದಾತ್ತ ಗುಣ (ಹುತಾತ್ಮ ಗುಣವಲ್ಲ) ಇವರ ಕಾವ್ಯದ ಜೀವನಾಡಿಯಾಗುವುದನ್ನು ಹೇಳಿದ್ದಾರೆ. ಅದು ಮೈ ತಳೆದಿರುವ ಸ್ವರೂಪವನ್ನು ಈಗ ಗುರುತಿಸಬಹುದಾಗಿದೆ. ಈ ಕೆಲವು ಕವಿತಾ ಭಾಗಗಳನ್ನು ನೋಡಿ :

ಮುವ್ವತ್ತು ವರ್ಷಗಳಿಂದಲೂ ನಿಂತಲ್ಲೇ ನಿಂತಿದೆ
ಗೇಟ ಬಳಿ ಗುಲ್ ಮೊಹರ್
ಅದೇ ಒರಟೊರಟು ಕಾಂಡ, ಅದೇ
ರೆಂಬೆಗಳ ಮುರುಕ
ಅದೇ ಕುಣಿತಕ್ಕೆ ಮೈ ನೀಡಿದಂತೆ ತ್ರಿಭಂಗಿ ಬಗೆ
ನೆಲದ ಪೋಷಣೆ ಹುಡುಕಿ
ಆಳಕ್ಕು ಇಳಿದ ಬೇರಗಳ ಬಿಗಿತ ಗುಲ್‌ಮೊಹರ್

ಕೈಕಾಲ್ಗೆ ಮೆತ್ತಿದ ಒದ್ದೆಮಣ್ಣು, ನೀರುಂಡು
ಹಸುರಿಸಿದ ಆ ಮಣ್ಣ ತೇವ ತಂಪು
ಸುತ್ತಲೂ
ಬೆಳೆವ ಗಿಡಬಳ್ಳಿಗಳ ಮೈ ರಸದ ಸರಭರ
ಸದ್ದು ಸೊಗಸು. ತಾಯಿ

ನೆಲದ ಸಂಪರ್ಕ ಬೇರುಗಳ ರೂಪದಲ್ಲಿ ಉಳಿದಲ್ಲದೆ ಈ ಜೀವಕ್ಕೆ ಬೇರೆ ಗತಿಯಿಲ್ಲವೆಂಬ ನಿಲುವನ್ನು ಚಿತ್ತಾಲರು ತಲುಪಿದ್ದಾರೆ. ಮೊದಲ ಕೆಲವು ಕವಿತೆಗಳಲ್ಲಿ ನೆಲ ಬಿಟ್ಟು 'ಆಕಾಶ ಪರವಶ'ವಾದ ಜೀವದ ಸಾಧನೆಗಳನ್ನು ಬೆರಗುಗಣ್ಣಿಂದ ನೋಡಿದ್ದಾರೆ. 'ಸುಧೀರ' ಕವಿತೆಯಲ್ಲಿ ಇಂಥ ಜೀವವೊಂದು ಬೆರಗನ್ನು ಹುಟ್ಟಿಸಿದರೂ

ಗರಿಬಿಚ್ಚಿ ನಿಗುರಿ ಗಗನಕ್ಕುಗಿದ ಈ ಬಾಣ
ಗಾಳಿ ಪಾಲಾಗಿ ನಾಲ್ಕಾರೆ ತಬ್ಬಲಿ ಪಕ್ಕ ಪುಕ್ಕ ಮಾತ್ರ ನೆಲಕ್ಕಿಳಿಸಿ
ತೆರಳಿಂವನು

ಎಂಬ ಸಾಲುಗಳು ಒಳಗೆಲ್ಲೊ ಈ ಬಗೆಯ ಜೀವನದ ನಿರರ್ಥಕತೆಯನ್ನು ಹುದುಗಿಸಿಟ್ಟುಕೊಂಡಿವೆ ಎನಿಸುವುದು. ಇದೇ ಧಾಟಿಯನ್ನು 'ಅಣ್ಣ' ಕವಿತೆಯಲ್ಲೂ ಕಾಣಬಹುದು. ಸಾವನ್ನೇ ಕುರಿತದ್ದಾದರೂ 'ತಾಯಿ' ಕವಿತೆ ಇದಕ್ಕಿಂತ ಬೇರೆಯ ಧಾಟಿಯನ್ನು ಹೊಂದಿದೆ. ತಾಯಿ ಬೆಳೆವ ಗಿಡಬಳ್ಳಿಗಳ ನಡುವೆ, ಅಲ್ಲ ಮಧ್ಯದಲ್ಲೇ ಇದ್ದವಳು. ಅವುಗಳಿಗೆ ನೀರುಣಿಸಿ ಬೆಳೆಸಿದವಳು. ತಾನು 'ಒಳಗೊಳಗೇ ಒರಲೆ ಹತ್ತಿ ಮೈಗೂಡು ಕಳಚಿ ಮಣ್ಣಾದರೂ' ಉಳಿದವರನ್ನು ಸಾಕಿದಳು. ಅವಳು ನೆಲದ ಸಂಪರ್ಕವನ್ನು ಬಿಡಲೇ ಇಲ್ಲ. ಸಸ್ಯ ಲೋಕದೊಡನೆ ಜೀವ ಸಖ್ಯವನು ಬೆಳೆಸಿಕೊಂಡಳು. ಅದಕ್ಕಾಗಿಯೇ ಮೂವತ್ತು ವರ್ಷವಾದರೂ ಆ ಸಸ್ಯಗಳಿಗೆ, ಕವಿತೆಯಲ್ಲಿ ನಾಯಕನಿಗೆ ನೆನೆದರೆ ಬಾಯಿ ನೀರೂರುತ್ತದೆ. ಏಕೆಂದರೆ ಅವಳೀಗ ತಾಯಿಬೇರು. ಕನ್ನಡ ಮಾತಿನ ಜಾಯಮಾನಗಳನ್ನೇ ಬಳಸಿಕೊಂಡು ಕವಿ ಇಲ್ಲೊಂದು ಮಹತ್ವದ ತಿರುವನ್ನು ನಮ್ಮ

ದೆರು ಇಟ್ಟುಬಿಡುತ್ತಾರೆ. ಅಣ್ಣ, ಸುಧೀರ ಕವಿತೆಗಳಿಗಿಂತ ಬೇರೆಯಾಗಿ ತಾಯಿ ಕವಿತೆ ನಿಲ್ಲುವುದೂ ಇದೇ ನೆಲೆಯಲ್ಲಿ. ಅದರ ಮುಂದುವರಿಕೆಯಾಗಿ 'ಗುಲ್ ಮೊಹರ್' ಕವಿತೆ ಇದೆ. ಗುಲ್‌ಮೊಹರ್ ನೆಲದೊಡನೆ ಸಂಪರ್ಕವನ್ನು ಬಿಟ್ಟಿಲ್ಲ. ಆದರ ಸಖ ನಾಯಕ.

ಹೊಸ ನಸುಕಿನಲ್ಲೆದ್ದು ದಿಗ್ದೇಶಗಳಿಗೆ
ಲಗ್ಗೆಯಿಡಲೆಂದು ಹೊರಟವನು
ಮೊದ ಮೊದ ಹೆಜ್ಜೆಗಲ್ಲಿ ಗೆಜ್ಜೆಗಿಲುಗಿನ ಹಿಗ್ಗ
ತುಳುಕಿಸುತ ನಡೆದವನು

ಆದರೆ ಈ ದಿಗ್ವಿಜಯ ನಡೆದಾಗಲೂ ಗುಲ್‌ಮೊಹರ್ ಅಲ್ಲೇ ನೆಲದೊಡನೆ ನಿಂತಿತ್ತು. ನಾಯಕ ತನ್ನ ನಡೆದಾಟ ಮುಗಿಸಿ ಹಿಂತಿರುಗಿ ಬರುತ್ತಾನೆ.

ಬಾಲ್ಯದೀ ಸಖನ ಸಹವಾಸ ಬಯಸಿ
ಕರುಬುತ್ತ ನಿಂದಿದ್ದೇನೆ
ಬಂಗಾರಗೆಂಪು ಹೂ ಹಿಡಿದ ರೆಂಬೆಗಳಡಿಗೆ
ಹೋಲಿಸುತ ನನ್ನ ದುರ್ದೆಶೆಯೊಡನೆ
ಇದರ ಈ ಬೇರ್ಬಿಟ್ಟು ನಿಂತಲ್ಲೆ ನಿಂತ
ನಿಶ್ಚಿಂತ ದಿಲ್ದಾರತನ

ನೆಲಕ್ಕೆ ಮರಳುವ ಪುರಾಣ ಪ್ರತೀಕ ಕವಿಯಲ್ಲಿ ಸಸ್ಯಲೋಕದ ಬಾಹ್ಯ ಸ್ಥಗಿತ, ಅಂತ ರಂಗ ಚಲನಶೀಲ ಸ್ಥಿತಿಯನ್ನು ವೈಭವಿಸುವತ್ತ ವ್ಯೆಗಂಡಿದೆ. ಸಸ್ಯಲೋಕ ಚಿತ್ತಾಲ ರಲ್ಲಿ ಪಡೆದುಕೊಳ್ಳುವ ಪ್ರತೀಕಾತ್ಮಕ ಮೌಲ್ಯವನ್ನು ಕುರಿತು ದೀರ್ಘವಾದ ಅಧ್ಯಯ ನಕ್ಕೆ ಅವಕಾಶವಿದೆ. ಅದಕ್ಕಿಲ್ಲಿ ನಾನು ತೊಡಗುವುದಿಲ್ಲ. ಆದರೆ ಕವಿ ನಿರರ್ಥಕ ಹಾಗೂ ನಿರಾಶೆಯ ನೆಲೆಗಳನ್ನು ತಲುಪುವ ಅವಸ್ಥೆಯಿಂದ ಕಂಡುಕೊಂಡ ಹೊರಚಾಚು ಗಳು ಮಾತ್ರ ಅತ್ಯಂತ ಸಮರ್ಪಕವಾಗಿ ಅವರ 'ಸಂಪರ್ಕ'ದ ಕವಿತೆಗಳಲ್ಲಿ ಮಂಡಿತವಾ ಗಿದೆ. ದೇಹವಿದ್ದೂ ಅದರ ಹಂಗನ್ನು ಮೀರುವ ಅವಕಾಶವಿರುವ ಒಳ ಚೈತನ್ಯದ ಸಸ್ಯ ಗಳು ಕವಿಗೆ ತಕ್ಕ ಪ್ರತೀಕಗಳಾದದ್ದು ಗಮನಾರ್ಹ. ತಾಯಿ ಕವಿತೆಯಲ್ಲಿ ನುಡಿಯುತ್ತಿ ರುವ ನಾಯಕನಿಗೆ ತಾಯಿ ಬೇರಾಗಿ ಉಣಿಸುವ ಕ್ರಿಯೆಯ ಆವರ್ತನ ಮನೋಲೋಕ ದಲ್ಲಿ ನಡೆಯುತ್ತಿರುವುದು ಹಾಗೂ ಅದು ಕವಿತೆಯ ಸೃಷ್ಟಿಗೆ ಕಾರಣವಾಗುತ್ತಿರುವುದು ಗಮನಾರ್ಹ. 'ಸಂಪರ್ಕ'ದಲ್ಲಿ ಅವರು ತಲುಪಿರುವ ಧೋರಣೆಗಳು ಮೊಳಕೆಯಾಗಿ ಆ ಕವಿತೆಯಲ್ಲಿ ಇವೆ.

ಕವಿತೆಯ ನಾಯಕ ಪಡೆದಿರುವ ಅರಿವಿನ ಬೆಳಕಿನಲ್ಲಿ

ಇದಬಣ್ಣಿ ಸಲೆಳೆಸುವ ಬರಿ ಮಾತು
ಏನನ್ನೂ ಹಿಡಿಯಲು ಬಾರದ ತೂತು

ವ್ಯಾಧಿ

ಎಂಬ ನಿಲುವಿಗೆ ತಳ್ಳುವುದು ಸಹಜವೇ ಆದರೂ, ಈ ಮೊದಲೇ ಹೇಳಿದಂತೆ ಕಾಡುವ ಭೂತ, ಹಾಗೂ ಕಾಯ್ದು ಎರಗಲಿರುವ ಭವಿಷ್ಯಗಳಲ್ಲಿ 'ಅರೆ ಸುಡುವೀ ಗೂಢ

ಹೊತ್ತು ತೊಳಲುವುದೊಂದೆ ಗತಿಯಾಯ್ತು ಜೀವನಿಗೆ' (ಗೂಢ) ಎಂಬ ನೋವಿನಲ್ಲಿ ವರ್ತಮಾನವನ್ನು ಅದರ ಸತ್ಯಗಳನ್ನು ದಾಖಲು ಮಾಡಲು ಕವಿಗೆ ಇರುವುದೊಂದೇ ಮಾರ್ಗ. ಅದು ಕವಿತೆಯ ರಚನೆ. 'ಸಂಪರ್ಕ'ದ ಕೊನೆಯ ಕವಿತೆ 'ಕೃಷಿ'ಯಲ್ಲಿ ಕವಿ ಹಲವು ಪ್ರಶ್ನೆಗಳನ್ನು ಹಾಕುತ್ತಾರೆ.

ಇಂತಹ ಇಳಿಗಾಲದಲ್ಲೂ
ಉಳಿದ ಅಲ್ಪ ಕಾಲದಲ್ಲೂ
ಮತ್ತೆ ಬೆಳೆಸ ಬೆಳೆಯೆನೆ ?
ಹರಗ ಬರದೆ ಬಿಟ್ಟ ಹೊಲವೆ
ಬಂಜೆ ಬಂಜೆರೆಂದ ನೆಲವೆ
ಒಳಗಿನೊಳಗೆ ಮರಳಿ ಪಡೆದು
ಒಳಸೆಲೆಗಳ ರಸವನು
ತನ್ನ ಮೂಲ ಕಸುವನು
ಹಾಲ್ದೆನೆಗಳು ತುಂಬಿ ತೊನೆವ
ಭರ್ತಿ ಪೈರ ನಿಲಿಸೆನೆ ?

ಈ ಪ್ರಶ್ನೆಗಳಲ್ಲಿ ಹಾಗೆ ಮಾಡಲಾರದ ಅಸಹಾಯಕತೆಯ ಜೊತೆಗೆ ಹಾಗೆ ಮಾಡದೆ ಅನ್ಯಥಾ ಮಾರ್ಗವಿಲ್ಲವೆಂಬ ಧಾಟಿ ಕೂಡ ಅಡಗಿದೆ. ಆದ್ದರಿಂದ ಕವಿತೆಯ ರಚನೆ ಕವಿಗೆ ತಕ್ಕ ಸೃಜನಶೀಲ ಮಾರ್ಗಗಳನ್ನು ಒದಗಿಸುವುದೆಂಬ ಭರವಸೆ ಇವೆ. ಆದರೆ ಇದೂ ಕೂಡ ಏಕಾಗಿ ? ಅದೇ ಕವಿತೆಯ ಮುಂದಿನ ಸಾಲು ನೋಡಿ :

ಮಳೆ ಗಾಳಿ ಬಿಸಿಲುಗಳು
ಉಣ್ಣಿಸುತಿವೆ, ಹಣ್ಣಿಸುತ್ತಿವೆ
ನಿತ್ಯ ಬೀಜ ಧಾರಣೆ.

ಸಸ್ಯದಿಂದ ಮರಳಿ ಸಫಲತೆಯ ಕುರುಹಾಗಿ ಬರುವ ಬೀಜಗಳು ಒಂದೆಡೆ ತಕ್ಕ ನೆಲಕಾಗಿ ಕಾಯುವ ಕವಿತೆಗಳನ್ನು ಸೂಚಿಸಿದರೆ, ಭವಿಷ್ಯದ ಕರಾಳ ಪೂರ್ವ ಲಿಖಿತ ಗಳನ್ನು ತಮ್ಮ ಒಳಗೆ ಅಡಗಿಸಿಟ್ಟುಕೊಂಡ ಜೀವ ಸೃಷ್ಟಿಗಳನ್ನೂ ಮತ್ತೊಂದೆಡೆಗೆ ಸೂಚಿಸುತ್ತವೆ. ಇಲ್ಲಿ ಕೂಡ ಕವಿಗೆ ಬಿಡುಗಡೆ ಇಲ್ಲ.

ಆದರೆ ಮುಖ್ಯವಾದ ಇನ್ನೊಂದು ಬೆಳವಣಿಗೆ ಇದೆ. ಬೀಜಗಳು ಚೈತನ್ಯ ತುಂಬಿ ಬೆಳೆಯಲು ತಕ್ಕ ಮಣ್ಣು ಬೇಕೆಂಬ ಹಿಂದಿನ ನಿಲುವು 'ಸಂಪರ್ಕ' ಕವಿತೆಯಲ್ಲಿ ಬದಲಾ ಗಿದೆ. ಈಗ 'ಖಾಲಿ ಟಿನ್ನುಗಳ ಬೀದಿ ಧೂಳಲ್ಲು ಮೈ ತಳೆದ ಸೃಜನದೀ ಕೌತುಕ ವನ್ನು ಕವಿ ಕಾಣುತ್ತಾರೆ. ಕವಿತೆಯ ಸಾರ್ಥಕತೆ ಮರಳಿ ಕವಿತೆಯನ್ನು ರೂಪಿಸುವಲ್ಲಿ ಕೂಡ ಇರಬಹುದು. ಹೊರತು ಅದು ಬೇರೆಲ್ಲೋ ತಕ್ಕ ಮನದಲ್ಲಿ ಬೀಳುವವರೆಗೆ ಕಾಯುವುದರಲ್ಲಿ ಅಲ್ಲವೆಂಬ ನಿಲುವು ಇಲ್ಲಿಯದು. ಇದು ಸಹೃದಯನ ಪಾತ್ರವನ್ನು ಅಲ್ಲ ಗೆಳೆಯುವುದಲ್ಲ. ಬದಲಿಗೆ ಕವಿತೆಯು ರಚನೆಯು ಜೈವಿಕ ಚಟುವಟಿಕೆಯಷ್ಟೇ ಮುಖ್ಯ ವಾದ, ಕವಿಯೊಬ್ಬ ತಲುಪಲೇಬೇಕಾಗಿರುವ ನೆಲೆಯಾಗಿದೆ ಎಂದು ನನಗೆ ಅನಿಸುತ್ತದೆ.

# ಚಿತ್ತಾಲರ 'ಹರಿವ ನೀರಿದು'-ಒಂದು ಭಾಷಿಕ ವಿವೇಚನೆ

ಕೃಷ್ಣ ಪರಮೇಶ್ವರ ಭಟ್ಟ

## I

ಗಂಗಾಧರ ಚಿತ್ತಾಲರ 'ಹರಿವ ನೀರಿದು' ಕವನ ಸಂಗ್ರಹದಲ್ಲಿಯ ಅದೇ ಶೀರ್ಷಿಕೆಯ ಕವನವೊಂದನ್ನು ಭಾಷೆಯ ದೃಷ್ಟಿಯಿಂದ ವಿವೇಚಿಸುವುದು ಪ್ರಸ್ತುತ ಟಿಪ್ಪಣಿಯ ಉದ್ದೇಶ. ಉತ್ತಮ ಕವನವೊಂದರ ಭಾಷೆ ಕವನದ ಅರ್ಥವನ್ನು ತನ್ನ ಎಲ್ಲ ರಚನಾ ಸ್ತರಗಳಲ್ಲಿಯೂ (ಧ್ವನಿ, ಪದ, ವಾಕ್ಯ ರಚನೆ, ಅರ್ಥವ್ಯವಸ್ಥೆ ಇತ್ಯಾದಿ) ಅಭಿನಯಿಸುವಂತಿರುತ್ತದೆ ಎಂಬುದು ಇಲ್ಲಿಯ ಪೂರ್ವಗ್ರಹಿಕೆ. ಪ್ರಸ್ತುತದಲ್ಲಿ ಕವನದ ವಾಕ್ಯರಚನೆ ಹಾಗೂ ಅರ್ಥವ್ಯವಸ್ಥೆಯನ್ನು, ಅವುಗಳನ್ನೂ ಸ್ಥೂಲವಾಗಿ ಮಾತ್ರ, ಗಮನಿಸಿ ಕೆಲವು ಮಾತುಗಳನ್ನು ಹೇಳಲಾಗುತ್ತದೆ.

ಮುಂದೆ ಬಳಸಲಾಗುವ ಕೆಲವು ಪಾರಿಭಾಷಿಕ ಶಬ್ದಗಳನ್ನು ಮೊದಲಿಗೇ ವಿವರಿಸುತ್ತೇನೆ. ಭಾಷೆಯಲ್ಲಿ ನಿಯೋಗಿಯುಕ್ತ ಹಾಗೂ ನಿಯೋಗಿರಹಿತ ಕ್ರಿಯಾಪದಗಳು ಎಂಬ ಎರಡು ಜಾತಿಯ ಕ್ರಿಯಾಪದಗಳಿವೆ ಎಂದು ಹೇಳುತ್ತಾರೆ. ವಾಕ್ಯದಲ್ಲಿ ಒಂದು ವಸ್ತು ತಾನೇ ಕ್ರಿಯೆಯಲ್ಲಿ ತೊಡಗಿರುವುದನ್ನು ಮಾತ್ರವೇ ಹೇಳಲು ಕ್ರಿಯಾಪದವು ಆಸ್ಪದ ಕೊಡುವಂಥಾದ್ದಾಗಿದ್ದರೆ ಅದನ್ನು ನಿಯೋಗರಹಿತ ಕ್ರಿಯಾಪದ ಎನ್ನಲಾಗುತ್ತದೆ. ಉದಾಹರಣೆಗೆ, 'ರಾಮ ಓಡುತ್ತಾನೆ', 'ಗಾಳಿ ಬೀಸುತ್ತದೆ' ಎಂಬಲ್ಲಿ ರಾಮ ಹಾಗೂ ಗಾಳಿ ಕ್ರಮವಾಗಿ ಓಡುವ ಹಾಗೂ ಬೀಸುವ ಕ್ರಿಯೆಯಲ್ಲಿ ತೊಡಗಿವೆ. ಇಲ್ಲಿ ಓಡು, ಬೀಸು ಎಂಬ ಧಾತುಗಳಿಂದ ಸಿದ್ಧವಾದ ಕ್ರಿಯಾಪದಗಳು ನಿಯೋಗಿರಹಿತ ಕ್ರಿಯಾಪದಗಳು. ಆದರೆ ಕೆಲವು ಕ್ರಿಯಾಪದಗಳು ಒಂದು ವಸ್ತು ಇನ್ನೊಂದುವಸ್ತು/ವಿಷಯದ ಮೇಲೆ ಪರಿಣಾಮ ಬೀರುವಂತೆ ಬಳಕೆಗೊಳ್ಳಲು ಆಸ್ಪದ ನೀಡುತ್ತವೆ. ಉದಾಹರಣೆಗೆ 'ಕೃಷ್ಣ ಹಣ್ಣನ್ನು ತಿಂದ' 'ಚೂರಿ ಹಗ್ಗವನ್ನು ಕತ್ತರಿಸಿತು' ಎಂಬಿವುಗಳಲ್ಲಿ ಕೃಷ್ಣ ಹಾಗೂ ಚೂರಿ ಎಂಬಿವುಗಳು ಕ್ರಮವಾಗಿ ಹಣ್ಣು ಹಾಗೂ ಹಗ್ಗ ಎಂಬ ಬೇರೊಂದುವಸ್ತುವಿನ ಮೇಲೆ ಪರಿಣಾಮ ಬೀರುವಂತೆ ಬಳಕೆಯಾಗಿವೆ. ಈ ರೀತಿಯ ವಾಕ್ಯಗಳಲ್ಲಿ ಬಳಕೆಯಾಗುವ ಕ್ರಿಯಾಪದಗಳು ನಿಯೋಗಿಯುಕ್ತ ಕ್ರಿಯಾಪದಗಳೆನ್ನಿಸಿಕೊಳ್ಳುತ್ತವೆ. ಕೆಲವು ಕ್ರಿಯಾಪದಗಳು ಮೇಲೆ ಹೇಳಿದ ಎರಡೂ ವರ್ಗಕ್ಕೆ ಸೇರುತ್ತವೆ. ಉದಾಹರಣೆಗೆ, ಬೀಸು ಎಂಬ ಧಾತು ಇಂತಹುದು. ಈ ನಿಯೋಗಿಯುಕ್ತ ಹಾಗೂ ನಿಯೋಗಿರಹಿತ ಎಂಬ ಭೇದಗಳು ವಾಕ್ಯ ರಚನೆಯಲ್ಲಿಯ ಸಕರ್ಮಕ ಹಾಗೂ ಅಕರ್ಮಕ ಎಂಬ ಭೇದವನ್ನೇ ಹೇಳುತ್ತವೆ.

ನಿಯೋಗರಹಿತ ಕ್ರಿಯಾಪದಗಳಲ್ಲಿ ಸ್ವಪ್ರೇರಿತ ಹಾಗೂ ಪರಪ್ರೇರಿತ ವಿಷಯ

ವಸ್ತುಗಳನ್ನು ಒಳಗೊಳ್ಳಬಲ್ಲ ಎರಡು ಜಾತಿಯ ಕ್ರಿಯಾಪದಗಳಿವೆ. ಉದಾಹರಣೆಗೆ ಮಾತನಾಡು, ನಗು ಎಂಬ ಧಾತುಗಳುಳ್ಳ 'ಹುಡುಗ ಮಾತನಾಡುತ್ತಿದ್ದಾನೆ' ಹಾಗೂ 'ಹುಡುಗಿ ನಗುತ್ತಿದ್ದಾಳೆ' ಎಂಬ ವಾಕ್ಯಗಳಲ್ಲಿ ಹುಡುಗ, ಹುಡುಗಿ ತಮ್ಮ ಮಾತನಾಡುವ ಹಾಗೂ ನಗುವ ಕ್ರಿಯೆಯನ್ನು ಸ್ವಇಚ್ಛೆಯಿಂದ ನಿಯಂತ್ರಿಸಿಕೊಳ್ಳಬಲ್ಲವರಾಗಿದ್ದಾರೆ. ಓಡು, ಹಾಡು ಮುಂತಾದವು ಈ ಜಾತಿಯ ಇತರ ಧಾತುಗಳು. ಆದರೆ ಬೀಸು, ಹರಿ ಧಾತುಗಳನ್ನುಳ್ಳ 'ಗಾಳಿ ಬೀಸುತ್ತದೆ', 'ನೀರು ಹರಿಯುತ್ತದೆ' ಎಂಬ ವಾಕ್ಯಗಳಲ್ಲಿಯ ಕ್ರಿಯೆ ಗಾಳಿ ಅಥವಾ ನೀರಿನಿಂದ ನಿಯಂತ್ರಿತವಾಗುವುದಲ್ಲ, ಬದಲಾಗಿ ಅವೇ ಕ್ರಿಯೆಗೆ ಅಧೀನವಾಗಿವೆ. ಅರ್ಥಾತ್ ಪರಪ್ರೇರಿತವಾಗಿವೆ. ಸೋರು, ಉಳಿ, ಸಾಯು ಈ ಜಾತಿಗೆ ಸೇರುವ ಇತರ ಕ್ರಿಯಾ ಧಾತುಗಳು.

ಕ್ರಿಯಾ ಪದಗಳನ್ನು ಶಬ್ದಾರ್ಥ ಹಾಗೂ ಅವು ಬಳಕೆಯಾಗುವ ವಾಕ್ಯರಚನೆಗಳನ್ನು ಗಮನಿಸಿ ಸಾಧಕ, ಬಾಧಕ, ಚಲನಸೂಚಕ, ಮಾನಸಿಕ, ವೃದ್ಧಿಸೂಚಕ, ಪ್ರೇರಣಾರ್ಥಕ ಎಂಬಿತ್ಯಾದಿಗಳಾಗಿ ವಿಂಗಡಿಸಬಹುದು. ಉದಾಹರಣೆಗ, ಕಟ್ಟು, ರಚಿಸು, ಕೂಡು ಇತ್ಯಾದಿಗಳು ಸಾಧಕಗಳು, ಮುರಿ, ಕೊಲ್ಲು, ತೊಳೆ ಇತ್ಯಾದಿಗಳು ಬಾಧಕಗಳು ; ಹರಿ, ಬರು, ನಡೆ ಇತ್ಯಾದಿಗಳು ಚಲನಸೂಚಕಗಳು; ನೋಯು, ಸಂತೋಷಪಡು, ಭಾವಿಸು ಇತ್ಯಾದಿಗಳು ಮಾನಸಿಕಗಳು; ಮಾಗು, ತುಂಬು, ಆಕಾರತಾಳು ಇತ್ಯಾದಿಗಳು ವೃದ್ಧಿಸೂಚಕಗಳು; ಹಾಗೂನಡೆಸು, ಮಾಡಿಸು ಇತ್ಯಾದಿಗಳು ಪ್ರೇರಣಾರ್ಥಕಗಳು.

## II

'ಹರಿವ ನೀರಿದು' ಕವನದಲ್ಲಿ ಬರುವ ವಾಕ್ಯಗಳನ್ನೆಲ್ಲ ಅವುಗಳ ರಚನೆಯನ್ನಾಧರಿಸಿ ಐದು ಮುಖ್ಯ ವರ್ಗಗಳನ್ನಾಗಿ ವಿಂಗಡಿಸಬಹುದು :

(i) ವಾಕ್ಯ = (ನಾಮಪದ ಗುಚ್ಛ) + ನಾಮಪದ ಗುಚ್ಛ

ಉದಾ : 'ಹರಿವ ನೀರಿದು' (ಇದು । ಹರಿವ ನೀರು)

'ಬರಿ ಪ್ರವಾಹವಿದಲ್ಲ' (ಇದು । ಬರಿ ಪ್ರವಾಹ-ಇದರ ನಿಷೇಧ ರೂಪ)

'ಬಾಳಿನದ್ಭುತ ವ್ಯೂಹ' ((ಇದು) । ಬಾಳಿನ ಅದ್ಭುತ ವ್ಯೂಹ)

(ii) ವಾಕ್ಯ = ನಾಮಪದ ಗುಚ್ಛ + (ಕ್ರಿ. ವಿಶೇಷಣ) + ಅಕರ್ಮಕ ಕ್ರಿಯಾಪದ

ಉದಾ : 'ಋತುಗಳ ವಿವರ್ತದಲಿ ಹೊಡೆತುಂಬುವುದು ಸದಾ ನೆನೆದು ಬೆಳೆಯುವ ಬಸಿರು,

(ಸದಾನೆನೆದು ಬೆಳೆಯುವ ಬಸಿರು । ಋತುಗಳ ವಿವರ್ತದಲಿ । ಹೊಡೆ ತುಂಬುವುದು)

'ಹಾರೈಸುತಿದೆ ಮನಸು' (ಮನಸು । ಹಾರೈಸುತಿದೆ)

'ಕೋರೈಸುತಿವೆ ಕನಸು' (ಕನಸು । ಕೋರೈಸುತಿವೆ)

(iii) ವಾಕ್ಯ = (ಕರ್ತೃ) ನಾಮಪದ ಗುಚ್ಛ + ಚತುರ್ಥ್ಯಂತ ನಾಮಪದ ಗುಚ್ಛ + ಅಕ. ಕ್ರಿಯಾಪದ

ಉದಾ : 'ಅಡಿನೆಲಕ್ಕಿದೆ ಅಡಿಯನೆತ್ತಿ ಹಿಡಿದು ಸೊಗಸಾಗಿ ಇಡಿಸುವ ಶ್ಲೋಕು'

(ಅಡಿಯನೆತ್ತಿ ಹಿಡಿದು ಸೊಗಸಾಗಿ ಇಡಿಸುವ ಶ್ಲೋಕು । ಅಡಿ ನೆಲಕ್ಕೆ । ಇದೆ)

'ಹೆಜ್ಜೆ ಹೆಜ್ಜೆಗು ಎಂಥ ಸಂಪನ್ನತೆಯ ಹರ್ಷ !'

(ಎಂಥ ಸಂಪನ್ನತೆಯ ಹರ್ಷ ಹೆಜ್ಜೆಹೆಜ್ಜೆಗೆ (ಇದೆ))

(iv) 'ಬೇಕು' ಎಂಬ ಕ್ರಿಯಾವ್ಯಯವುಳ್ಳ ವಾಕ್ಯಗಳು

ಉದಾ : 'ಬಾಗಿದೆದೆಗವಚಿ ಬಲಿಯಲು ಬೇಕು'

'ನಕ್ಕು ನಲಿಯಲು ಬೇಕು'

(v) (ಕರ್ತೃ) ನಾಮಪದ ಗುಚ್ಛ + (ಕರ್ಮ) ನಾಮಪದ ಗುಚ್ಛ + (ಇತರ) + ಕ್ರಿಯಾಪದ

ಉದಾ : 'ತುಂಬಲಾರೆವೆ ಅದನು ? (ಅದನು ತುಂಬಲಾರೆವೆ ?)

'ಹಿಡಿದಿರುವೆ ರಮಿಸಿ ಗೂಢವ' (ಗೂಢವ ರಮಿಸಿ ಹಿಡಿದಿರುವೆ)

ಮೇಲೆ ಹೇಳಿದ ಐದು ಜಾತಿಯ ವಾಕ್ಯಗಳನ್ನು ಒಂದಿಲ್ಲೊಂದು ರೀತಿಯಲ್ಲಿ ಸಂಕ್ಷೇಪಿಸಿ ಅವನ್ನು ಇನ್ನೊಂದು ವಾಕ್ಯದೊಳಗೆ ಅಥವಾ ವಾಕ್ಯದ ಜೊತೆಗೆ ಸೇರಿಸಿ ಸಾಧಿಸಿದ ಸಂಕೀರ್ಣವಾದ ವಾಕ್ಯಗಳನ್ನು ಕವನದಲ್ಲಿ (ತೋರಿಕೆಯ) ವಾಕ್ಯಗಳನ್ನಾಗಿ ಬಳಸಿಕೊಳ್ಳಲಾಗಿದೆ. ಉದಾಹರಣೆಗೆ, 'ಹರಿವ ನೀರಿದು' ಎಂಬಲ್ಲಿಯ ಧಾತುಸಾಧಿತ ವಾದ ವಿಶೇಷಣ 'ಹರಿವ' ಎಂಬುದು '(ನೀರು) ಹರಿಯುತ್ತದೆ' ಎಂಬ ವಾಕ್ಯದ ಸಂಕ್ಷೇಪವಾಗಿದೆ. ಹಾಗೆಯೇ 'ಹದನುಗೊಳಿಸುತ ಸಾಲುಗಟ್ಟಿ ಬಂದೇ ಬರುವ ಋತು ಗಳ ವಿವರ್ತದಲಿ' ಎಂಬ ಪದಗುಚ್ಛ ಋತುಗಳು ಹದಗುಗೊಳಿಸುತ್ತವೆ, ಋತುಗಳು ಸಾಲುಗಟ್ಟುತ್ತವೆ ; ಋತುಗಳು ಬರುತ್ತವೆ ಎಂಬ ವಾಕ್ಯಗಳನ್ನು ಒಳರಚನೆಯಲ್ಲಿ ಅಡಗಿಸಿಕೊಂಡ ತೋರಿಕೆಯ ರೂಪವಾಗಿದೆ. ಹೀಗೆ ಕವನದಲ್ಲಿಯ ತೋರಿಕೆಯ ವಾಕ್ಯಗಳಲ್ಲಿ ಅಡಗಿದ ಒಳವಾಕ್ಯಗಳನ್ನು ಮೇಲಿನಂತೆ ಐದು ವರ್ಗಗಳಾಗಿ ವಿಂಗಡಿಸಿದಾಗ ಕವನದ ಎಂಟು ಭಾಗಗಳಲ್ಲಿ ಬಳಕೆಯಾದ ಆಯಾ ಜಾತಿಯ ವಾಕ್ಯಗಳ ಸಂಖ್ಯೆಯ ಪ್ರಮಾಣವನ್ನು ಕೆಳಗಿನ ಕೋಷ್ಟಕದ ಮೂಲಕ ತೋರಿಸಬಹುದು :

ಈ ಕೋಷ್ಟಕದಲ್ಲಿಯ ವಿವರಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು : ಕೇವಲ ನಾಮಪದಗುಚ್ಛಗಳನ್ನುಳ್ಳ (ಕ್ರಿಯಾಪದವಿಲ್ಲದ) ವಾಕ್ಯಗಳು ವಿಶೇಷವಾಗಿ ಕವನದ ಮೊದಲೆರಡು ಭಾಗಗಳಲ್ಲಿ ಕೇಂದ್ರೀಕೃತವಾಗಿವೆ. ಅಕರ್ಮಕ ಕ್ರಿಯಾಪದ ಗಳುಳ್ಳ (ನಿಯೋಗಿಯನ್ನು ಒಳಗೊಳ್ಳದ) ವಾಕ್ಯಗಳ ಸಂಖ್ಯೆ ಅತಿ ಹೆಚ್ಚಾಗಿದ್ದು ಅವು ಕವನದ ಹೆಚ್ಚಿನ ಭಾಗಗಳಲ್ಲಿ ಹಂಚಿಹೋಗಿವೆ. 'ಬೇಕು' ಅವ್ಯಯವುಳ್ಳ ವಾಕ್ಯಗಳ

| ಕವನದ ಭಾಗಗಳು→ ವಾಕ್ಯಜಾತಿ ↓ | 1&2 | 3 | 4 | 5 | 6 | 7 | 8 | ಒಟ್ಟು |
|---|---|---|---|---|---|---|---|---|
| (i) | 11 | 1 | — | 5 | — | — | 3 | 20 |
| (ii) | 5 | 10 | 12 | 15 | 15 | 9 | 18 | 84 |
| (iii) | — | 4 | — | — | — | — | — | 4 |
| (iv) | — | 6 | — | — | — | — | — | 6 |
| (v) | 1 | 9 | 2 | 5 | 10 | 6 | — | 33 |

ಸಂಖ್ಯೆ ಕಡಿಮೆ ಇದ್ದು ಅದು ಕವನದ ಒಂದು ಭಾಗದಲ್ಲಿ ಮಾತ್ರವಿದೆ. ಸಕರ್ಮಕ ಕ್ರಿಯಾಪದವುಳ್ಳ (ನಿಯೋಗಿಯುಕ್ತವಾದ) ವಾಕ್ಯಗಳ ಪ್ರಮಾಣ ಸಾಮಾನ್ಯವಾಗಿದ್ದು ಅವು ಕವನದ ಕೆಲವು ಭಾಗಗಳಲ್ಲಿ ವಿಶೇಷವಾಗಿ ಕೇಂದ್ರೀಕೃತವಾಗಿವೆ. ಮೂರನೇ ಜಾತಿಯ ವಾಕ್ಯರಚನೆಯ ಸಂಖ್ಯೆಯೂ ಅತ್ಯಲ್ಪವಾಗಿದ್ದು ಅವು ಕವನದ ಒಂದೇ ಭಾಗದಲ್ಲಿ ಸೇರಿವೆ.

ಈಗ ಮೇಲಿನ ವಾಕ್ಯಜಾತಿಗಳಲ್ಲಿ ಬರುವ ಕ್ರಿಯಾಪದಗಳಿಂದಾಗುವ ಪರಿಣಾಮವನ್ನೂ ಈ ವಾಕ್ಯರಚನೆಗಳನ್ನು ಸಂಕ್ಷೇಪಗೊಳಿಸಿ ಅಡಕಿಸಿ ಸಿದ್ಧಗೊಳಿಸಿದ ತೋರಿಕೆಯ ಅಥವಾ ಹೊರರಚನೆಯನ್ನು ಬಳಸಿದಾಗ ಉಂಟಾಗುವ ಪರಿಣಾಮವನ್ನೂ ಗಮನಿಸಬಹುದು. ಮೇಲೆ ಹೇಳಿದ ಮೂರನೆಯ ಜಾತಿಯ ವಾಕ್ಯಗಳಲ್ಲಿ ಕ್ರಿಯಾಪದ ಸ್ಪಷ್ಟವಾಗಿಯೋ ಅಧ್ಯಾಹಾರವಾಗಿಯೋ ಇರುವುದಾದರೂ ಅದು ಇರು ಧಾತುವಿನಿಂದ ಸಾಧಿತವಾದದ್ದು. ಉದಾ : 'ಬಾನಗೆರೆಗಿದೆ ಜೀಕು' (ಜೀಕು ಬಾನಗೆರೆಗೆ ಇದೆ). ಇರು ಧಾತುವುಳ್ಳ ವಾಕ್ಯಗಳಲ್ಲಿ ನಾಮಪದ ಸೂಚಿಸುವ ವಿಷಯಗಳು ಗಮನ ಸೆಳೆಯುತ್ತವೆಯೇ ವಿನಾ ಕ್ರಿಯೆಯಲ್ಲ. ಆದ್ದರಿಂದ ಈ ವಾಕ್ಯಗಳು ವಿಷಯ ಪ್ರಸ್ತಾವನೆಯನ್ನು ಮಾತ್ರ ಮಾಡಬಹುದು. ಮೊದಲನೇ ಜಾತಿಯ ಕೇವಲ ನಾಮಪದಗುಚ್ಛವುಳ್ಳ ವಾಕ್ಯಗಳೂ ಇದೇ ಕೆಲಸವನ್ನೇ ಮಾಡುತ್ತವೆ. ಉದಾಹರಣೆಗೆ, 'ಅದು ಮರ' ಎಂಬಂಥ ವಾಕ್ಯಗಳು ವಿಷಯ ಪ್ರಸ್ತಾವನೆಯನ್ನೋ ಅಥವಾ ಒಂದು 'ಸ್ಥಿತಿ'ಯನ್ನು ಹೇಳುವಲ್ಲಿ ನೆರವಾಗುತ್ತವೆ. 'ಅದು ದೊಡ್ಡ ಮರ' ಎಂಬಲ್ಲಿ ದೊಡ್ಡ ಎಂಬುದು ಮರ ಎಂಬ ವಿಷಯ/ವಸ್ತುವಿನ ಮೇಲೆ ಹೆಚ್ಚು ಒತ್ತು ಬೀಳುವಂತೆ ಮಾಡುತ್ತದೆ. ಇಲ್ಲಿ ದೊಡ್ಡ ಎಂಬ ವಿಶೇಷಣದ ಸ್ಥಾನದಲ್ಲಿ ಧಾತುಸಾಧಿತ (ಒಂದು ವಾಕ್ಯದ ಸಂಕ್ಷಿಪ್ತ ರೂಪವಾದ) ವಿಶೇಷಣವನ್ನು ತಂದಾಗ ವಿಷಯದ ಮೇಲಿರುವ ಒತ್ತು ಹೆಚ್ಚಾಗುತ್ತದೆ.

'ಹರಿವ ನೀರಿದು' ಎಂಬ ವಾಕ್ಯವನ್ನಿಲ್ಲಿ ಗಮನಿಸಬಹುದು. ಇದು 'ನೀರು ಹರಿಯುತ್ತಿದೆ' ಎಂಬ ವಾಕ್ಯವನ್ನು 'ಇದು ನೀರು' ಎಂಬ ವಾಕ್ಯದೊಳಗೆ ಸೇರಿಸಿದುದರಿಂದಾದ ವಾಕ್ಯವಾಗಿದೆ. ಈ ಎರಡು ವಾಕ್ಯಗಳಲ್ಲಿ 'ಇದು ನೀರು' ಎಂಬುದು ವಿಷಯವನ್ನು ಪರಿಚಯಿಸುತ್ತಿದೆ/ಪ್ರಸ್ತಾಪಿಸುತ್ತಿದೆಯಷ್ಟೆ. 'ನೀರು ಹರಿಯುತ್ತಿದೆ' ಎಂಬುದು ಕ್ರಿಯೆ ನಡೆಯುವುದನ್ನು ಹೇಳುತ್ತದೆ. ಇವುಗಳ ಸಂಯೋಗದಿಂದಾದ 'ಹರಿವ ನೀರಿದು' ಎಂಬುದರಲ್ಲಿಯೂ ಹರಿವ ಎಂಬುದು ನೀರಿಗೆ ('ದೊಡ್ಡ ಮರ' ಎಂಬಲ್ಲಿಯಂತೆ) ವಿಶೇಷಣವಾಗಿ ಬಂದಿರುವುದರಿಂದ ಇಲ್ಲಿಯೂ ವಾಕ್ಯ ಕ್ರಿಯೆಯನ್ನು ಹೇಳದು ; ಬದಲಾಗಿ ವಿಷಯ ('ನೀರು')ವನ್ನು ಪ್ರಸ್ತಾಪಿಸುತ್ತಿದೆ. ಈ ವಾಕ್ಯರಚನೆಯಿಂದ ಆದ ಸಾಧನೆ : ಹರಿ ಕ್ರಿಯಾಪದವಾಗಿ ಬರುವ ವಾಕ್ಯದಲ್ಲಿ ಅದೇ ಕೇಂದ್ರವಾಗಿದ್ದರೆ ಇಲ್ಲಿ ಅದು ವಿಶೇಷಣವಾಗಿರುವುದರಿಂದ ಅದರ ಮೇಲಿರುವ ಒತ್ತು ನಾಮಪದಕ್ಕೆ ('ನೀರು') ವರ್ಗಾಯಿಸಲ್ಪಟ್ಟಿದೆ. ಇದರಿಂದ ಏಕಕಾಲದಲ್ಲಿ ಎರಡು ಬಗೆಯ ಪ್ರಯೋಜನಗಳುಂಟಾದಂತಾಯಿತು. ಒಂದು, ನೀರು ಎಂಬ ವಿಷಯ ಶುದ್ಧ ವಿಶೇಷಣಗಳಿಂದ ಪಡೆಯಬಹುದಾದ್ದಕ್ಕಿಂತ ಹೆಚ್ಚು ಒತ್ತನ್ನು ಪಡೆದಂತಾಯಿತು ; ಎರಡು, ವಾಕ್ಯ ಕ್ರಿಯೆಯನ್ನು ಒಳಗೆ ಹುದುಗಿಸಿಕೊಂಡಂತಹ ಒಂದು ಸ್ಥಿತಿಯನ್ನು ಸೂಚಿಸಿದಂತಾಯಿತು. (ಅಂದರೆ ಈ ವಾಕ್ಯ ಸ್ಥಿತಿ ಮತ್ತು ಕ್ರಿಯೆ ಎರಡನ್ನೂ ಹೇಳುತ್ತಿದೆಯೆಂದು ಅರ್ಥ). ಕವನದ ಪ್ರಾರಂಭದ ಎರಡು ಭಾಗಗಳಲ್ಲಿ ಈ ಬಗೆಯ ವಾಕ್ಯಗಳೇ ಹೆಚ್ಚಾಗಿರುವುದರಿಂದ ಆಗುವ ಪರಿಣಾಮವನ್ನು ಈಗ ಊಹಿಸಬಹುದು. ಈ ಸ್ಥಿತಿ ಮತ್ತು ಚಲನೆಯನ್ನು ಹೇಳುವ ವಾಕ್ಯ, ಪದಗುಚ್ಛಗಳೂ ಈ ಭಾಗದಲ್ಲಿವೆ. ಉದಾಹರಣೆಗೆ,

"ಕ್ಷಣಗಳೂ ಹಿಣಿಯಲ್ಲೆ ಜೀವವಾಹಿನಿ ಹಿಡಿದ ಅಭಿಮುಖ ಪ್ರವಾಹವೇ !
....................................................................................
ನಿಂತಲ್ಲು ಕಾಲಡಿಗೆ ಸರಿವ ಪಥವೇ !''

ಹಾಗೂ

"ನಿನ್ನೊಡಲಿನೋಘದಲಿ
ಒಮ್ಮೆ ಮಿಂದಲ್ಲಿ ಇನ್ನೊಮ್ಮೆ ಮಿಂದವರಾರು ?
.......................................................
ನಿನ್ನ ಅವಿರತದ ಗತಿಯಲ್ಲಿ
ನಿಮಿಷಕ್ಕೂ ಮಿಕ್ಕಿ ಒಂದೆಡೆಗೆ ನಿಂತವರಾರು ?"

ಎಂಬ ಸಮಾನ ರಚನೆಯ (structural parallels) ಆದರೆ ವಿರೋಧಾರ್ಥವನ್ನು ಹೇಳುವ (semantic opposites) ಪದಗುಚ್ಛ/ವಾಕ್ಯಗಳನ್ನಿಲ್ಲಿ ನೋಡಬಹುದು. ಮೊದಲ ಉದಾಹರಣೆಯಲ್ಲಿಯ ಎರಡೂ ಸಾಲುಗಳ ರಚನೆ : ಸ್ಥಳವಾಚಕ (ಕ್ರಿ.ವಿ.) ಪದಗುಚ್ಛ + ಧಾತು ಸಾಧಿತ ವಿಶೇಷಣ + ನಾಮಪದ ಗುಚ್ಛ. ಇಲ್ಲಿಯ ಮೊದಲ

ಸಾಲಿನಲ್ಲಿಯ ವಿಶೇಷಣ ಸ್ತಬ್ಧ ಸ್ಥಿತಿಯನ್ನೂ ನಾಮಪದಗುಚ್ಛ ಚಲನೆಯನ್ನೂ ಸೂಚಿಸಿದರೆ ಎರಡನೇ ಸಾಲಿನಲ್ಲಿಯ (ಸರಿವ) ವಿಶೇಷಣ ಚಲನೆಯನ್ನೂ ನಾಮಪದ (ಪಥ) ಚಲನೆಯಿಲ್ಲದ ವಸ್ತುವನ್ನೂ ಸೂಚಿಸುತ್ತದೆ. ಎರಡನೆಯ ಉದಾಹರಣೆಯಲ್ಲಿ ಒಂದು ಸಾಲು ಕ್ರಿಯೆಯನ್ನೂ ಇನ್ನೊಂದು ನಿಷ್ಕ್ರಿಯೆಯನ್ನೂ ಹೇಳುತ್ತದೆ.

ಈಗ ಅಕರ್ಮಕ ಅಥವಾ ಅಥವಾ ನಿಯೋಗಿರಹಿತ ಕ್ರಿಯಾಪದಗಳು ವಾಕ್ಯದಲ್ಲಿ (ಹಿಂದೆ ಹೇಳಿದ ಎರಡು ಹಾಗೂ ಮೂರನೇ ಜಾತಿಯ ವಾಕ್ಯಗಳು) ಬಳಕೆಯಾಗುವುದಕ್ಕೂ ಹಾಗೂ ಸಕರ್ಮಕ ಅಥವಾ ನಿಯೋಗಿಯುಕ್ತ ಕ್ರಿಯಾಪದಗಳು ವಾಕ್ಯದಲ್ಲಿ (ಹಿಂದೆ ಹೇಳಿದ ಐದನೇ ಜಾತಿಯ ವಾಕ್ಯಗಳು) ಬಳಕೆಯಾಗುವುದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸೋಣ. ನಿಯೋಗಿಯುಕ್ತ ಕ್ರಿಯಾಪದವಿರುವ 'ರಾಮು ಕೃಷ್ಣನನ್ನು ಕೊಂದ' ಎಂಬ ವಾಕ್ಯದಲ್ಲಿ ಎರಡು ಬೇರೆ ಬೇರೆ ಸಂಗತಿಗಳನ್ನು ಒಟ್ಟಾಗಿ ಹೇಳಲಾಗುತ್ತಿದೆ. ಒಂದು 'ಕೃಷ್ಣ ಸತ್ತ' ಎಂಬುದು. ಎರಡು, ಈ ಸಾಯುವ ಘಟನೆಗೆ ರಾಮು ಕಾರಣನಾದ ಅಥವಾ ರಾಮು ಈ ಘಟನೆಯನ್ನು ನಡೆಸಿದ ಎಂಬುದು. ಹೀಗೆ ಒಂದು ವಸ್ತು/ವ್ಯಕ್ತಿಗೆ ಸಂಬಂಧಿಸಿದ ಘಟನೆಯನ್ನು ನಡೆಸುವ/ನಿಯಂತ್ರಿಸುವ ಶಕ್ತಿ ಇನ್ನೊಬ್ಬನಲ್ಲಿದೆ ಎಂಬುದು ವ್ಯಕ್ತವಾಗುತ್ತದೆ. ಆದರೆ ಸಾಯು ಎಂಬ ನಿಯೋಗಿರಹಿತವಾದ ಕ್ರಿಯಾಪದವುಳ್ಳ 'ಕೃಷ್ಣ ಸತ್ತ' ಎಂಬಂತಹ ವಾಕ್ಯಗಳಲ್ಲಿ (ಉದಾ ; ಅವನು ಓಡುತ್ತಿದ್ದಾನೆ; ಗಾಳಿ ಬೀಸುತ್ತಿದೆ ಇತ್ಯಾದಿ) ಕ್ರಿಯೆ ನಡೆಯುತ್ತಿರುವುದು ಬೇರೊಬ್ಬರಿಂದಲ್ಲ ಎಂಬುದು ವ್ಯಕ್ತವಾಗುತ್ತದೆ ಹಾಗೂ ಇಂತಹ ನಿಯೋಗಿರಹಿತ ಕ್ರಿಯಾಪನಗಳಲ್ಲಿ ಒಂದು ವರ್ಗವಾದ ಪರಪ್ರೇರಿತ ವಿಷಯಗಳನ್ನೊಳಗೊಳ್ಳಬಲ್ಲ ಕ್ರಿಯಾಪದಗಳಿರುವ ವಾಕ್ಯಗಳಲ್ಲಿ (ಉದಾ : ಹುಡುಗ ಬೀಳುತ್ತಿದ್ದಾನೆ, ಗಾಳಿ ಬೀಸುತ್ತಿದೆ, ಕಾಲ ಸರಿಯುತ್ತಿದೆ ಇತ್ಯಾದಿ) ವ್ಯಕ್ತಿ/ವಸ್ತುಗಳು ಕ್ರಿಯೆಗೆ ಒಳಗಾಗಿದ್ದಾರೆಯೇ ವಿನಾ ಅದನ್ನು ನಿಯಂತ್ರಿಸಲಾರರು ಹಾಗೂ ಕ್ರಿಯೆಗೆ ಬೇರೊಬ್ಬರು ಕಾರಣರಲ್ಲ (ಆಗಿದ್ದರೆ ಗೊತ್ತಿಲ್ಲ) ಎಂಬುದು ವ್ಯಕ್ತವಾಗುತ್ತದೆ.

ಕವನದ ಪ್ರಾರಂಭದಿಂದಲೂ, ವಿಶೇಷವಾಗಿ ಮೂರನೆಯ ಭಾಗದಿಂದ ಮುಂದಕ್ಕೆ ಮೇಲೆ ಹೇಳಿದಂತಹ ನಿಯೋಗಿರಹಿತವಾದ ವಾಕ್ಯಗಳು (ನೋಡಿ : ಹಿಂದಿನ ಕೋಷ್ಟಕದಲ್ಲಿ ವಾಕ್ಯಜಾತಿ ii ಹಾಗೂ iii ) ಉಳಿದ ರೀತಿಯ ರಚನೆಗಳಿಗಿಂತ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಈ ಎಲ್ಲ ವಾಕ್ಯಗಳ ಅರ್ಥ : ವ್ಯಕ್ತಿ/ವಸ್ತುಗಳು ತಾವಾಗಿಯೇ ಪ್ರಾರಂಭಿಸಬಹುದಾದ ಕ್ರಿಯೆಯಲ್ಲಿ ತೊಡಗಿವೆ ಅಥವಾ ಕ್ರಿಯೆಯೊಂದಕ್ಕೆ ಅನಿವಾರ್ಯವಾಗಿ ಒಳಗಾಗಿವೆ. ಈ ಕವನದಲ್ಲಿ ಬಳಕೆಯಾದ ನಿಯೋಗಿರಹಿತವಾದ ಕ್ರಿಯಾಪದಗಳಲ್ಲಿಯೂ ಒಟ್ಟು ಸಂಖ್ಯೆಯ ಹೆಚ್ಚಿನ ಭಾಗ ಪರಪ್ರೇರಿತ ವಿಷಯಗಳನ್ನೊಳಗೊಳ್ಳಬಲ್ಲ ಕ್ರಿಯಾಪದಗಳಿಂದ ಕೂಡಿದೆ (ಸ್ವಪ್ರೇರಣೆಯನ್ನು ಹೇಳುವ ಧಾತುಗಳ ಸಂಖ್ಯೆ = 10; ಪರಪ್ರೇರಿತ ವಿಷಯವನ್ನೊಳಗೊಳ್ಳುವ ಧಾತುಗಳ ಸಂಖ್ಯೆ = 35. ಇಲ್ಲಿ ಪುನರಾವರ್ತನೆಗೊಂಡ ಧಾತುಗಳ ಸಂಖ್ಯೆಯನ್ನು ಪರಿಗಣಿಸಿಲ್ಲ.)

ಇಂತಹ ಕ್ರಿಯಾಪದಗಳಿಂದ ಕೂಡಿದ ಎಲ್ಲ ವಾಕ್ಯಾರ್ಥಗಳ ಸಾರಾಂಶವಿಷ್ಟೆ: ಈ ಎಲ್ಲ ವಾಕ್ಯಗಳಲ್ಲಿಯ ಕರ್ತೃಗಳು (ವ್ಯಕ್ತಿ/ವಸ್ತು) ತಮ್ಮಿಂದ ನಿಯಂತ್ರಿಸಲಸಾಧ್ಯವಾದ ಕ್ರಿಯೆಯೊಂದಕ್ಕೆ ಆಧೀನವಾಗಿವೆ. ಈ ಅರ್ಥ ಕವನದ ಕೆಲವು ಸಾಲುಗಳಲ್ಲಿ ವ್ಯಕ್ತವಾಗಿದೆ:

"ಹಿಡಿಯಲಾರದುದ ಹಿಡಿದಿಡುವ ಹಂಬಲವೇಕೆ ?
ತುಂಬಲಾರೆವೆ ಅದನು ?
ತುಂಬು ತುಂಬು
ಜೀವಂತವಿರುವನಕ ಜೀವನವಿದೊಂದೆ ಗತಿ
ಕೊನೆಯೇರು, ತೊನೆದಾಡು, ಮಾಗು, ರಸದುಂಬು"

ಮೇಲಿನ ಒಂದು ಹಾಗೂ ನಾಲ್ಕನೆಯ ಸಾಲಿನಲ್ಲಿ ಈ 'ಪರಾಧೀನತೆ' ಸೂಚಿತವಾಗಿದೆ. ಉಳಿದ ಸಾಲುಗಳಲ್ಲಿ ಈ ಪರಾಧೀನತೆಗೆ ಒಂದು ರೀತಿಯ ಪ್ರತಿಕ್ರಿಯೆಯಾಗಿ ಕೆಲವು ಕ್ರಿಯೆಗಳನ್ನು ಸೂಚಿಸಿದೆ. ಇದು: ಪರಾಧೀನವಾದ ಸ್ಥಿತಿಯಲ್ಲೂ, ಹಿನ್ನೆಲೆಯಲ್ಲಿಯೂ ಅದನ್ನು ಮೌನವಾಗಿ/ನಿಶ್ಚೇಷ್ಟಿತವಾಗಿ ಒಪ್ಪಿಕೊಳ್ಳದೆ ಇತರ ತನ್ನಿಂದ ಸಾಧ್ಯವಾದ ಕ್ರಿಯೆಗಳನ್ನು ನಡೆಸುತ್ತಲೇ ಇರುವುದು. (ತೋರಿಕೆಗೆ ಈ ಹೇಳಿಕೆ ಅಸಂಬದ್ಧವೆನಿಸಬಹುದು. ಈ ಒಂದು ಉದಾಹರಣವಾಕ್ಯವನ್ನು ಗಮನಿಸಿ: 'ಸಾಯುವ ಮೊದಲು ಹುಡುಗ ತುಟಿಯ ಮೇಲೆ ಒಣನಗುವೊಂದನ್ನು ತಂದುಕೊಂಡ' ಇಲ್ಲಿ ಸಾಯುವುದು ಅನಿವಾರ್ಯವಾದ ಕ್ರಿಯೆ; ನಗು ತರಿಸಿಕೊಳ್ಳುವುದು ಸ್ವನಿಯಂತ್ರಿತ ಕ್ರಿಯೆ)

ನಿಯೋಗಿಯುಕ್ತವಾದ ಕ್ರಿಯಾಪದಗಳುಳ್ಳ ವಾಕ್ಯಗಳು (ವಾಕ್ಯಜಾತಿ v ) ಕವನದ ಮೂರು ಹಾಗೂ ಆರನೆಯ ಭಾಗದಲ್ಲಿ ಹೆಚ್ಚಾಗಿ (ಹೊರ ರಚನೆಯ ವಾಕ್ಯದಲ್ಲಿಯ ಪೂರ್ಣ ಕ್ರಿಯಾಪದಗಳನ್ನು ಮಾತ್ರ ಗಮನಿಸಿದರೆ, ಈ ಬಗೆಯ ವಾಕ್ಯಗಳಲ್ಲಿ ಅತಿಹೆಚ್ಚಿನವೂ ಈ ಎರಡು ಭಾಗಗಳಲ್ಲಿಯೇ ಇವೆಯೆಂದು ಹೇಳಬಹುದು) ಸೇರಿವೆ. ಈ ಭಾಗಗಳಲ್ಲಿಯೇ (ಪ್ರತಿ)ಕ್ರಿಯೆ ನಡೆಯಬೇಕಾದ ಅಪೇಕ್ಷೆಯೋ (ಉದಾ: ಮೂರನೇ ಭಾಗದಲ್ಲಿ ವಾಕ್ಯಜಾತಿ iv ರ ಮೂಲಕ) ನಡೆದುದೋ (ಭಾಗ ಆರರಲ್ಲಿ) ಸೂಚಿತವಾಗಿದೆ ಎಂಬುದು ಸೂಚಿತವಾಗುತ್ತದೆ.

ಕವನದ ವಾಕ್ಯಗಳ ರಚನೆ ಸೂಚಿಸುವ ಈ ಎಲ್ಲ ಅರ್ಥಗಳನ್ನು ಕವನದ ಸಾಮಾನ್ಯ ಓದಿನಿಂದ ದೊರೆಯುವ ತಿಳುವಳಿಕೆಯನ್ನೂ ಆಧರಿಸಿ ಹೀಗೆ ಸಂಗ್ರಹಿಸಿ ಹೇಳಬಹುದು: ಕಾಲದ ಹೊಳೆ ವ್ಯಕ್ತಿಯ ಜೀವನವನ್ನು ಬಾಧಿಸುತ್ತಲೇ ಇರುತ್ತದೆ. ಈ ಕ್ರಿಯೆಗೆ ಒಳಗಾಗುವುದನ್ನು ತಪ್ಪಿಸಿಕೊಳ್ಳಲು ವ್ಯಕ್ತಿಯಿಂದ ಸಾಧ್ಯವಿಲ್ಲ. ಆದರೆ ಈ ಕಾರಣಕ್ಕಾಗಿ ಜೀವನವನ್ನು ನಿರಾಕರಿಸದೆ ಕಾಲಗರ್ಭವನ್ನು ತನ್ನ (ಪ್ರತಿ)ಕ್ರಿಯೆಗಳಿಂದ (ಹಿಂದಿನವರ ಹಾಗೆ) ತುಂಬುವುದು ಆತನಿಗೆ ಅಪೇಕ್ಷಣೀಯವಾದದ್ದು. (ಈ ಕ್ರಿಯೆ–ಪ್ರತಿಕ್ರಿಯೆಯನ್ನು ಸೂಚಿಸುವಂತೆ ಈ ಕವನದಲ್ಲಿಯ ಸಾಧಕ–ಬಾಧಕ ಕ್ರಿಯಾಪದಗಳ ಸಂಖ್ಯೆ ಬಹುಮಟ್ಟಿಗೆ ಸಮನಾಗಿವೆ.) ಕವನದಲ್ಲಿಯ ಮಾನಸಿಕ

ಕ್ರಿಯಾಪದಗಳ ಅತ್ಯಲ್ಪ ಸಂಖ್ಯೆ ಈ ಕಾಲ ಮತ್ತು ವ್ಯಕ್ತಿಯ ಸಂಬಂಧವನ್ನು ಕುರಿತು ಕವಿ ಯಾವ ಅನ್ನಿಸಿಕೆಯನ್ನೂ ವ್ಯಕ್ತ ಪಡಿಸುತ್ತಿಲ್ಲ ಎಂಬುದನ್ನು ಹೇಳಬಹುದು. ವೃದ್ಧಿಸೂಚಕ ಕ್ರಿಯಾಪದಗಳ ಸಂಖ್ಯೆಯೂ ಅತ್ಯಲ್ಪವಾಗಿದ್ದು ಅದು ಕವಿ ಸೂಚಿಸುವ (ಪ್ರತಿ)ಕ್ರಿಯೆಯನ್ನು ಬೆಂಬಲಿಸುವಂತೆ ಬಂದಿವೆ.

ಮೇಲಿನ ವಿವೇಚನೆ, ಕವನದ ಒಂದು ಮುಖ್ಯವಾದ ಅರ್ಥವನ್ನು ಮಾತ್ರ ಹೇಳುತ್ತದೆಯೆ ಹೊರತು ಅದರ ಎಲ್ಲ ಅರ್ಥದ ಮಗ್ಗುಲುಗಳನ್ನೂ ಅಲ್ಲ. ಇಲ್ಲಿ ವಾಕ್ಯ ರಚನೆಯ, ಅದರಲ್ಲಿಯೂ ಕ್ರಿಯಾಪದಗಳನ್ನು ತೊಡಗಿಸಿಕೊಂಡ ರೀತಿಯನ್ನು ಮಾತ್ರ ಗಮನಿಸಲಾಗಿದೆ. ಈ ಕ್ರಿಯಾಪದಗಳು ಒಳಗೊಳ್ಳುವ ವಿಷಯಗಳನ್ನೂ ಗಮನಿಸಿದರೆ ಇನ್ನೂ ಕೆಲವು ವಿಚಾರಗಳನ್ನು ಹೇಳಲು ಸಾಧ್ಯವಾಗಬಹುದು.

---

* ಈ ಲೇಖನದಲ್ಲಿ ಕ್ರಿಯಾಪದಗಳ ವಿಂಗಡಣೆಯನ್ನು ಹೆಸರಿಸುವಾಗ ಡಿ. ಎನ್. ಶಂಕರ ಭಟ್ಟ (1978) ಅವರ 'ಕನ್ನಡ ವಾಕ್ಯಗಳು' ಎಂಬ ಕೃತಿಯ ನೆರವು ಪಡೆದಿದ್ದೇನೆ. ಅವರಿಗೆ ನನ್ನ ಕೃತಜ್ಞತೆಗಳು.

---

"ಗಂಗಾಧರ ಚಿತ್ತಾಲರು ಇನ್ನೊಬ್ಬ ಪ್ರಗತಿಶೀಲ ಮನೋವೃತ್ತಿಯುಳ್ಳ ಕವಿಯಾಗಿದ್ದಾರೆ. ಇವರ ಸಂಗ್ರಹವಾದ 'ಕಾಲದ ಕರೆ' ಯಲ್ಲಿ ಈ ಮನೋವೃತ್ತಿ ಆವೇಶಪೂರ್ಣವಾಗಿದೆ. 'ನೆಲದ ಒಂದು ತುಂಡಿಗೇಕೋ, ತಾಯಿಯೆಂದು ಸಾಯಬೇಕೋ' ಎಂಬ ಸಾಲು ಈ ಮಾತನ್ನು ಸೃಷ್ಟಿಗೊಳಿಸುತ್ತದೆ. ಆದರೆ ಚಿತ್ತಾಲರ ಪ್ರಗತಿಶೀಲತೆಗೆ 'ರೋಮ್ಯಾಂಟಿಕ್' ಭಾವನೆಯೇ ಮೂಲವಾಗಿದೆಯೆಂಬುದನ್ನು ಮರೆಯಲಾಗದು. ಆ ಸಂಗ್ರಹ ಪ್ರಕಟವಾದ ಮೇಲೆ ಅವರು ಬರೆದ ಕವಿತೆಗಳು ಈ ಮಾತಿಗೆ ಸಾಕ್ಷಿಯಾಗಿವೆ. ಈ ಕವಿತೆಗಳ ಸಂಖ್ಯೆ ಕಡಿಮೆಯಾಗಿದ್ದರೂ, ಪ್ರತಿಯೊಂದು ಕವಿತೆಯಲ್ಲಿಯೂ ಚಿತ್ತಾಲರ ಪ್ರಾಮಾಣಿಕತೆ ಮಿಡಿಯುತ್ತಿದೆ. ವಿನಾಯಕರ 'ಸಮುದ್ರ ಗೀತಗಳ'ಲ್ಲಿಯ ಕಾವ್ಯ ಶ್ರದ್ಧೆಯನ್ನು ಚಿತ್ತಾಲರ ಕಾವ್ಯದಲ್ಲಿ ಗುರುತಿಸಬಹುದಾಗಿದೆ. ವಿನಾಯಕರಂತೆಯೇ ಇವರು ಮಾನವನ ವಿಕಾಸದಲ್ಲಿ, ಪ್ರಗತಿಶೀಲತೆಯಲ್ಲಿ ವಿಶ್ವಾಸವುಳ್ಳವರು. 'ರೋಮ್ಯಾಂಟಿಕ್' ಸಂಪ್ರದಾಯದ ಇಂಥ ಮನೋಭೂಮಿಕೆಗೆ ನವ್ಯ ಪ್ರಜ್ಞೆಯಿಂದ ಬಂದ ಬುದ್ಧಿವಾದ ಬಲವನ್ನೂ ತರ್ಕಶುದ್ಧತೆಯನ್ನೂ ತಂದುಕೊಟ್ಟಿದೆ. ಮೇಲಾಗಿ ಚಿತ್ತಾಲರ ಸರಳವಾದ, ನೇರವಾದ, ನಿರಾಡಂಬರವಾದ ಶೈಲಿ ವಿಶಿಷ್ಟವಾದ ಕಾಂತಿಯಿಂದ ಬೆಳಗುತ್ತದೆ. ಪ್ರತಿಕ್ರಿಯಾತ್ಮಕವಾದ ದಾರಿಯನ್ನು ಬಿಟ್ಟು ಕೊಟ್ಟು ನವ್ಯಮಾರ್ಗಕ್ಕೆ ಸೇರಿದವರಲ್ಲಿ ಚಿತ್ತಾಲರು ಮೊದಲಿಗರಾಗಿದ್ದಾರೆ."

—ಕೀರ್ತಿನಾಥ ಕುರ್ತಕೋಟಿ

ಯುಗಧರ್ಮ ಹಾಗೂ ಸಾಹಿತ್ಯ ದರ್ಶನ

---

# ದೇಹ, ಸೃಷ್ಟಿ ಮತ್ತು ಚಿತ್ತಾಲರ ಕಾವ್ಯ

ಡಾ॥ ಬಸವರಾಜ ಕಲ್ಗುಡಿ

1

ಈ ಲೇಖನದಲ್ಲಿ ಗಂಗಾಧರ ಚಿತ್ತಾಲರ ಕಾವ್ಯವು ದೇಹದ ಸಮಸ್ಯೆ ಹಾಗೂ ಸೃಷ್ಟಿಕ್ರಿಯೆನು ಸ್ವರೂಪವನ್ನು ನೋಡಿರುವ ರೀತಿಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಸೃಷ್ಟಿಯ ಮೂಲಭೂತ ಗುಣವಾದ ನಿರಂತರ ಚೈತನ್ಯ, ಹೊಸ ಆವಿಷ್ಕಾರವನ್ನು ಸಾಧ್ಯವಾಗಿಸಿಕೊಳ್ಳುವ ಶಕ್ತಿ–ಇವುಗಳನ್ನು ಕಾಲಕ್ಕೆ ಅಧೀನವಾದ ದೇಹವು ಪ್ರಕಟಿಸುವ ನೆಲೆಗಳನ್ನು ಕುರಿತ ಆಲೋಚನೆಯು ಇವರ ಕಾವ್ಯಗಳ ಪ್ರಮುಖ ಆಶಯವಾಗಿದೆಯೆಂದೇ ಹೇಳಬಹುದು. ಇವರ ಕಾವ್ಯಗಳ ವಸ್ತುವಿನ ಮೂಲಸತ್ವವು ದೇಹ, ಸಾವು, ಸೃಷ್ಟಿ ಈ ತ್ರಿಕೋನ ಸಂಬಂಧದಲ್ಲೇ ರೂಪು ತಳೆಯುತ್ತದೆ, ಮನುಕುಲದ ಹಾಡು, ಹರಿವ ನೀರಿದು, ಸಂಪರ್ಕ ಈ ಕವನ ಸಂಕಲನಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಮೇಲಿನ ಮೂರು ವಸ್ತುಗಳ ಸಂಬಂಧವನ್ನು ಕುರಿತಾದಂಥ ಆಲೋಚನೆಯು ಮೂಡಿಯೇ ಇದೆ. ಈ ಸಂಬಂಧಗಳ ಸ್ವರೂಪವನ್ನು ಚಿತ್ರಿಸುವಲ್ಲಿ ಕವಿಯ ಕವನಗಳು ಕೊಡುವ ಒತ್ತುಗಳು ಯಾವ ಕಡೆಗಿವೆ ಎನ್ನುವುದರ ಮೇಲೆ ಕವನದ ಸತ್ವವು ಗೋಚರಿಸುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಸಂಕಲನದಿಂದ ಸಂಕಲನಕ್ಕೆ ಕವಿ ಗಂಗಾಧರ ಚಿತ್ತಾಲರು ಪಡೆದಂಥ ಪ್ರಬುದ್ಧ ಬೆಳವಣಿಗೆ ಅನೇಕ ರೀತಿಯದ್ದಾಗಿದೆ. ಜೀವನದ ಗ್ರಹಿಕೆ, ತಾತ್ವಿಕ ಸ್ವರೂಪಗಳು– ಇವುಗಳು ಕಲಾಕೃತಿಯಾಗುವ ಬಗೆಗಿನ ಕಾಳಜಿ– ಇವೆಲ್ಲವೂ ಕವನದಿಂದ ಕವನಕ್ಕೆ ಕವಿಯು ಸಾಧಿಸುತ್ತ ಹೋಗಿರುವ ಪ್ರಯತ್ನಗಳೇ ಆಗಿವೆ. ಈ ಬೆಳವಣಿಗೆಯ ಸ್ವರೂಪವನ್ನು–ಅವರ ಕಾವ್ಯದ ಮುಖ್ಯವಾದ ಮೂರು ವಸ್ತುಗಳೆಂದು ನಾನು ಈಗಾಗಲೇ ಹೇಳಿದ–ದೇಹ, ಸಾವು, ಸೃಷ್ಟಿ ಇವುಗಳ ಹಿನ್ನೆಲೆಯಲ್ಲಿ ನೋಡಲು ಪ್ರಯತ್ನಿಸುತ್ತೇನೆ.

2

'ಮನುಕುಲದ ಹಾಡು' ಕವನ ಸಂಕಲನದ 'ದುಃಖಗೀತೆ' ಕವನದ ಬಗ್ಗೆ ಈಗಾಗಲೇ ಎರಡು ರೀತಿಯ ಗ್ರಹಿಕೆಗಳು ಮೂಡಿವೆ 'ವಾಚ್ಯಾತೀತವಾದ, ಅಗಮ್ಯವಾದ ಅಚಿಂತ್ಯವಾದ ನೋವನ್ನು ಮಾತುಗಳ ಮೂಲಕ, ತತ್ವಗಳ ಮೂಲಕ ಗೆಲ್ಲಲು ಹೋಗಿ ವಿಫಲವಾಗುವುದೇ 'ದುಃಖಗೀತೆ'ಯ ವಸ್ತು, ಎಂದು ಅನಂತಮೂರ್ತಿಯವರು ಹೇಳಿದ್ದಾರೆ. ('ಹರಿವ ನೀರಿದು' ಸಂಕಲನದ ಮುನ್ನುಡಿ)ಇದಕ್ಕೆ ಪ್ರತಿಕ್ರಿಯಿಸುತ್ತ ಶಾಂತಿನಾಥ ದೇಸಾಯಿಯವರು ದುಃಖಗೀತ ಕವನದಲ್ಲಿ ಕಾಣುವುದು ವಾಚಾಳಿತನವಲ್ಲ

ಎನ್ನುತ್ತಾರೆ. ಅವರ ಪ್ರಕಾರ 'ದುಃಖಗೀತ'ದಲ್ಲಿ ಬರುವ ಚಿಂತನೆಯಲ್ಲಿ ಬರೀ ಹೇಳಿಕೆಯಿಲ್ಲ. ಚಿಂತನೆ ಸಂದರ್ಭಕ್ಕನುಸಾರವಾಗಿ ಭಾವನೆಗಳ ಮೂಲಕ ಬಿಸಿಯಾಗುವುದೂ ಉರಿದು ಪ್ರಜ್ವಲಿಸುವುದೂ 'ದುಃಖಗೀತ'ದ ಕಾವ್ಯ ಲಕ್ಷಣವಾಗಿದೆ (ಸಾಕ್ಷಿ, 1981 ಮಾರ್ಚ್).

ಕವಿತೆಯ ಸ್ವರೂಪವನ್ನು ಕುರಿತ ವಿಚಾರವನ್ನು ಇನ್ನೊಂದು ರೀತಿಯಲ್ಲೂ ಇಲ್ಲಿ ನೋಡಬಹುದು, ದೇಹ ಹಾಗೂ ಜಗತ್ತಿನ ನಿಯಮದ ಬಗ್ಗೆ ಕವನದಲ್ಲಿ ನಿಶ್ಚಿತವಾದ ನಿಲುವುಗಳು, ತಿಳಿವಳಿಕೆಗಳು ಇವೆ.

(1) ಈ ಹುಟ್ಟು ಸಾವು ಬೇಡಿದುದೆ–ಅಹ ಕೊಟ್ಟುದಿದು.
ಜೀವದೀ ದ್ರವ್ಯ, ಈ ಪ್ರಾಣಗತಿ–ಕೊಟ್ಟುದಿದು
.... .... .... .... ....
ಈ ಪರಾಧೀನತೆಯ ಮೇಲೆ ಕಟ್ಟಿದೆ ನಮ್ಮ ಕರ್ತೃತ್ವದಧ್ವಾನ.

(2) ಬಾನ ತಳ ಚಿಪ್ಪೊಡೆದು ಸಿಡಿದಂತೆ ಕೂಗಿದರು, ಒರಲಿದರು,
ದಿಕ್ಕು ದಿಕ್ಕುಗಳ ಕದ ಕದ ಬಡೆದು ನರಳಿದರು
ಅಹ! ನಿರುತ್ತರ ನಿರುತ್ತರ ನಿರುತ್ತರ ಸೃಷ್ಟಿ.

ಕಾವ್ಯದಲ್ಲಿ ಪ್ರಶ್ನೆಯೆಂದು, ಆತಂಕಭರಿತ ಮನೋಭಾವನೆಂದು ತಿಳಿದ ಹಲವಾರು ಸಮಸ್ಯೆಗಳಿಗೆ ಕಾವ್ಯದ ನಾಯಕನಲ್ಲೇ ಉತ್ತರವಿದೆ. ಹೀಗಾಗಿ ಕವನದಲ್ಲಿ ನಾಯಕನು ಹಾಕಿಕೊಳ್ಳುವ ಪ್ರಶ್ನೆಗಳು ಕಾವ್ಯದ ಸ್ವರೂಪದ ದೃಷ್ಟಿಯಿಂದ ಹೇಳುವುದಾದರೆ ಕಾವ್ಯವನ್ನು ಅತ್ಯಂತ ಸಡಿಲಾಗಿಸಿ. ಹಿಗ್ಗಿಸುವ ಕಾರ್ಯವನ್ನು ಮಾಡುತ್ತವೆ.

ಈ ಕವನದ ಇನ್ನೊಂದು ಮುಖ್ಯ ಲಕ್ಷಣ ಜೀವ ಮತ್ತು ಸಾವು ಇವುಗಳ ನಡುವಣ ನೇರ ದ್ವಂದ್ವ. ಕಾವ್ಯದ ಚೌಕಟ್ಟಿನಲ್ಲಿ ಸಾವಿನ ಬಗೆಗಿನ ಸೆಳೆತವು ತಾನೇ ತಾನಾಗಿ ವಿಜೃಂಭಿಸುತ್ತದೆ. ಸಾವಿನ ಬಗ್ಗೆ ಕಾವ್ಯದ ನಾಯಕನಿಗೆ ನಿಶ್ಚಿತ ನಿರ್ಧಾರವಿದೆ. ಇಂಥ ನಿರ್ಧಾರದ ಕ್ಷಣಗಳಲ್ಲಿಯೂ 'ಮರಳಿಬಾರದ ಈ ಅನೂಹ್ಯ ಅರರೇ! ಈ ಅಮೂಲ್ಯ ಜೀವ ಜ್ಯೋತಿ!' 'ಮಣ್ಣ ನಿದ್ದೆಯೊಳಿಂದ ಒಂದೇ ಆಯುಷ್ಕಾಲ ಸಿಕ್ಕ ಎಚ್ಚರವಿದಯ್ಯಾ ಬದುಕು–' ಎಂಬ ಜೀವದ ಬಗೆಗಿನ ಮಾತುಗಳು ಕೇಳಿಬರುತ್ತವೆ. ಈ ಮಾತುಗಳು ಕೇವಲ ತಾತ್ವಿಕ ಸ್ವರೂಪದ್ದಾಗಿ ತೋರುತ್ತವೆ. ಬದುಕು–ಸಾವುಗಳ ನಡುವಣ ಸಂಘರ್ಷದ ತೀವ್ರ ಸೆಳೆಗಳು ಇಲ್ಲಿ ಕೇವಲ ತೋರಿಕೆಯದಾಗಿ ಬಿಡುತ್ತವೆ. ವಾಸ್ತವವಾಗಿ ಸಾವಿನ ಬಗ್ಗೆ ಕೊಡಲಾಗುವ ಅತೀವ ಒತ್ತು, ಜೀವನದ ಸಂಕೀರ್ಣ ನೆಲೆಯ ಆಯಾಮಗಳನ್ನು ತುಂಡರಿಸುವಂಥದ್ದೇ ಆಗಿದೆ. ಸಾವಿನ ಅನಿವಾರ್ಯ ನೆಲೆಯು ಬದುಕನ್ನು ಗ್ರಹಿಸುವ ಶಕ್ತಿಯ ಸಾಧ್ಯತೆಗಳನ್ನು ತೀವ್ರಗೊಳಿಸುವುದಾದರೆ ಮಾತ್ರ ಅದಕ್ಕೊಂದು ಅರ್ಥವಿದೆ. ಅದಲ್ಲದೆ ತಾನೇ ತಾನಾಗಿ ಮೆರೆಯುವ ಸ್ವರೂಪವನ್ನು ಅದು ಪ್ರಕಟಿಸಿದ್ದಾದರೆ, ಇಡೀ ಓಘವೇ ಅಂತ್ಯದ ಕಡೆಗೆ, ಕೊನೆ ಮುಟ್ಟುವುದರ ಕಡೆಗಿದ್ದು ಬಹಳ Flat ಆದ, ಸರಳವಾದ ಆಯಾಮವು ರೂಪುಗೊಳ್ಳುವುದು ಅನಿ

ಪಾರ್ಯ. 'ದುಃಖಗೀತೆ'ಯಲ್ಲಿ ಇಡೀಕವನವು ಇಂಥ ಕೊನೆಯೊಂದರ ಚಿತ್ರಣವೇ ಆಗಿದೆ. ಹೀಗಾಗಿ ಜೀವನದ ಬಗೆಗಿನ ಅರಿವು, ತಾತ್ವಿಕ ಗ್ರಹಿಕೆಗಳು ಕಾವ್ಯ ನಾಯಕನ ಅನುಭವದ ಭಾಗವಾಗಿ ರೂಪುಗೊಳ್ಳುವುದಿಲ್ಲ.

3

ದೇಹಕ್ಕೆ ಇರುವ ಕಾಲದ ಮಿತಿ, ಅದರ ಸೃಷ್ಟಿ ಚೈತನ್ಯದ ಸ್ವರೂಪ, ಇವುಗಳ ಬಗ್ಗೆ ಖಚಿತವಾದ ದರ್ಶನಗಳು 'ಹರಿವ ನೀರಿದು' ಕವನ ಸಂಕಲನದ ಕವನಗಳಲ್ಲಿ ಕಾಣುವುದನ್ನು ಗಮನಿಸಬಹುದು, ದರ್ಶನ ಖಾಚಿತ್ಯವೊಂದು ರೂಪುಗೊಳ್ಳುತ್ತಿರುವುದನ್ನು ಚಿತ್ತಾಲರು 'ಮನುಕುಲದ ಹಾಡು' ಸಂಕಲನದ 'ಕನಸು ತಲೆಯುಲಿ ತುಂಬಿದಂಥ ಹುಡುಗ' ಕವನವನ್ನು 'ಹರಿವ ನೀರಿದು' ಸಂಕಲದ 'ಕಾಮಸೂತ್ರ' ಕವನದಲ್ಲಿ ಸೃಷ್ಟಿ ಕ್ರಿಯೆಯ ಸ್ವರೂಪವನ್ನು ಚಿತ್ರಿಸುವ ಅಂಗವಾಗಿ ಬಳಸಿಕೊಳ್ಳುವ ಪ್ರಯತ್ನದಲ್ಲೇ ಗಮನಿಸಬಹುದಾಗಿದೆ.

ಸೃಷ್ಟಿಯ ಕಾಲಾತೀತವಾದಂಥ ಚೈತನ್ಯದ ಸ್ವರೂಪಕ್ಕೂ ಮತ್ತು ಕಾಲದಿಂದ ಬಾಧಿತವಾದ ದೇಹದ ಸ್ವರೂಪಕ್ಕೂ ಸಂಬಂಧವನ್ನು ಕಲ್ಪಿಸುವ ನೆಲೆಗಳ ಹುಡುಕಾಟ 'ಹರಿವ ನೀರಿದು' ಕವನ ಸಂಕಲನದ ಕವನಗಳ ಮುಖ್ಯ ಆಶಯವಾಗಿದೆ. ಈ ದೃಷ್ಟಿಯಿಂದ ನೋಡುವುದಾದರೆ 'ಹರಿವ ನೀರಿದು' ಕವನದಲ್ಲಿ ರೂಪುಗೊಂಡ ಜೀವನ ದೃಷ್ಟಿಯೇ ಒಂದರ್ಥದಲ್ಲಿ ಈ ಸಂಕಲನದ ಉಳಿದ ಕವನಗಳ ವಸ್ತುವಿನ ರಚನೆಯನ್ನು ರೂಪುಗೊಳಿಸಿದೆ ಎಂದು ಹೇಳಬಹುದು.

'ಇಲ್ಲಿ
ಕಾಲಾತೀತದಲ್ಲಿ
ಕಾಲಾಧೀನರಾಗಿ ಚರಿಸುವದೊಂದೆ
ಬೆರಗಿನರ್ಭಕ ದೃಷ್ಟಿ ಚಾಚಿ ಅಭ್ಯಾಗತರ ತೆರದಿ ನೆಲಸುವುದೊಂದೆ
ನಶ್ವರತೆಯನೆ ಫಲಿಸಿ ಕುಡಿಯೊಡೆಯಬಿಟ್ಟು
ಶಾಶ್ವತಿಯ ನಿಲಿಸುವುದೊಂದೆ (ಹರಿವ ನೀರಿದು)

ಈ ಜೀವನ ದೃಷ್ಟಿಯನ್ನೇ ಸಂಕಲನದ ಉಳಿದ ಕವನಗಳು (ಹೆಂಡತಿಗೆ, ತಾಯಿ, ಅಣ್ಣ, ಕಣ್ಣು. ಕಾಮಸೂತ್ರ) ಮುಖ್ಯ ಆಶಯವನ್ನಾಗಿ ಮೂಡಿಕೊಂಡಿವೆ.

ಸೃಷ್ಟಿಯ ಮುಖ್ಯ ದ್ರವ್ಯಗಳು–ನೆಲ, ನೀರು, ವಾಯು, ಶಾಖ – ಇವು ಒಗ್ಗೂಡುತ್ತ ಚೈತನ್ಯದ ಹಸಿರನ್ನು ಹೊಮ್ಮಿಸುವ ಕ್ರಿಯೆಯ ಬಗ್ಗೆ ಕಾವ್ಯದಲ್ಲಿ ಬೆರಗು, ಸಂತೋಷಗಳು ಕಂಡುಬರುತ್ತವೆ. ದೇಹದ ಸಂಬಂಧದಲ್ಲಿಯೂ ಇಂಥ ಸೃಷ್ಟಿ ಕ್ರಿಯೆಯು ಫಲಪೂರ್ಣಗೊಳ್ಳುವ ಸಾಧ್ಯತೆಯನ್ನು ಇಲ್ಲಿನ ಹಲವಾರು ಕವಿತೆಗಳು ಶೋಧಿಸುತ್ತವೆ. ಈ ಸೃಷ್ಟಿಕ್ರಿಯೆ 'ಬಯೊಲಜಿಕಲ್' ಹಂತದಲ್ಲಿ ರೂಪುಗೊಳ್ಳುವ ಪ್ರಕ್ರಿಯೆಯನ್ನು 'ಕಾಮಸೂತ್ರ' ಕವನ ವಿವರಿಸಿದರೆ, ಇನ್ನೂ ಮುಂದುವರೆದು–ದೇಹವು ಒಳಗೊಂಡಿರುವ ಜೀವದ ಅಂತಃಸತ್ವದಲ್ಲೇ, ವ್ಯಕ್ತಿತ್ವದ ಸೃಷ್ಟಿಯಲ್ಲೇ ಇಂಥ

ಚೈತನ್ಯ ಬೆಳೆಯಬೇಕಾದ ಸ್ವರೂಪವನ್ನು ಈ ಸಂಕಲನದ ಹಲವಾರು ಕವನಗಳು ಹಾರೈಸುತ್ತವೆ. ಈ ಹಾರೈಕೆಗೆ ಮುಖ್ಯ ಕಾರಣ ದೇಹವು ಕಾಲಕ್ಕೆ ಅಧೀನವಾಗಿರುವ ಅನಿವಾರ್ಯ ಸಂಗತಿಯೇ ಆಗಿದೆ.

ಸಾವಿನ ಸ್ವರೂಪವು ಇಲ್ಲಿನ ಅನೇಕ ಕವನಗಳಲ್ಲಿ ಭಯಾನಕವಾಗಿ ಕಾಡಿಸುವ ಹಾಗೆ ಕಂಡರೂ, ಅದನ್ನು ವಿಜೃಂಭಿಸುವ, ಅದರ ಗೂಢತೆಯನ್ನು ಅರಿಯಬೇಕೆನ್ನುವ ಪ್ರಯತ್ನಗಳು ಇಲ್ಲಿ ಇಲ್ಲವೇ ಇಲ್ಲ. ಸಾವಿನ ಕ್ರೂರ ಮುದ್ರೆಗಳು ಇಲ್ಲಿನ ಅನೇಕ ಕವನಗಳಲ್ಲಿ ಕಾಡುವ ಸಂಗತಿಗಳೇನೋ ನಿಜ.

ಜೀವದೊಡಲಲ್ಲೇ ನಿರ್ಜೀವಗೊಳಿಸುವ ಬಿರುಕು
ಸೋರುವುದು ನೆರೆಗೆಂಪು ಬಿಳಿಚೆಗಲ್ಲ
ಕೊನೆಗುಳಿವುದೊಂದೆ ಬೆಕ್ಕಸಗೊಂಡ ತಲೆಬುರುಡೆ
ಎದೆಯು ಝಲ್ಲೆನ್ನುವಂತೆ
ಕಿರಿದು ಹಲ್ಲ (ಹರಿವ ನೀರಿದು)

'ಹರಿವ ನೀರಿದು' ಕವನದ ಸಾಲಿನ ಈ ಚಿತ್ರವಾಗಲೀ ಸಾವು–ಭೌತಿಕ ದೇಹದ ಮೇಲೆ ತನ್ನ ಪ್ರಭಾವ ಬೀರಿದ ವರ್ತಮಾನ ಸ್ಥಿತಿಯನ್ನು ವಿವರಿಸುವ ಕೆಲವು ಕವನಗಳು, ಉದಾ.ಗೆ : ಸುಧೀರ ಕವನ, (ಗಮನಿಸಿ, ಮೊದಲ ಸಾಲುಗಳು–'ಮಣ್ಣಾಗಿದ್ದಾನೆ ಹುಡುಗ !.... ಹೆಡೆಗೇರಿ ಬಿಗಿಗೊಂಡ ಕೋದಂಡದಂಥವನು, ಈಗ ಮಣ್ಣಾಗಿದ್ದಾನೆ.) ತಾಯಿ ಕವನ, (ಗಮನಿಸಿ : 'ಕಂಡವರೆಲ್ಲ ಹೇಳುತ್ತಾರೆ. ಅಲ್ಲಿ ಈಗ ಏನೂ ಉಳಿದಿಲ್ಲ, ಮನೆ ನಿಂತ ಜಾಗ ಸಾಪು ಸಪಾಟು....') ಅಣ್ಣ ಎನ್ನುವ ಕವನ, (ನೋಡಿ : ನೆರಳೆದ್ದು ಬರುವುದನು ಕಂಡಿದ್ದನೇ ? ಹೊರಡಬೇಕಾದವನು ಒಬ್ಬಂಟಿ ಎನಿಸಿ ಎದೆ ಗುಂದಿದ್ದನೆ ?)–ಈ ಯಾವ ಕವನಗಳೂ–ಭೌತಿಕ ದೇಹದ ಮೇಲಾದ ಈ ಪರಿಣಾಮವನ್ನು ಮುಖ್ಯವೆಂದು ಭಾವಿಸಿಲ್ಲ. ಆದರ ಬದಲು ಮನುಷ್ಯನ ಬದುಕಿನ ಸಫಲ ಸ್ವರೂಪಗಳೇ ಮುಖ್ಯವೆಂದೂ, ಸಾವನ್ನು ಮೆಟ್ಟಿನಿಲ್ಲುವಂಥವುಗಳೆಂದು ಸಾಧಿಸಲು ಯತ್ನಿಸಿವೆ.

ದಿನನಿತ್ಯದ ಮನುಷ್ಯನ ಬದುಕಿನ ಒಳಗಿನಿಂದಲೇ ಉದ್ಭವವಾಗುವ ಆಧ್ಯಾತ್ಮಿಕ ನೆಲೆಗಳಾದ–ಪ್ರೇಮ, ನಡಾವಳಿಯ ಸ್ವರೂಪ, ಬಾಂಧವ್ಯ, ಸೌಂದರ್ಯ ಹಾಗೂ ಜ್ಞಾನದ ಅಭಿವ್ಯಕ್ತಿ ಇವುಗಳ ಬಗ್ಗೆ ಕವಿಗೆ ಅಗಾಧವಾದ ಕಾಳಜಿ ಇದೆ. ಇದೇ ಮುಖ್ಯವೆಂದು ಕವಿ ಭಾವಿಸುತ್ತಾನೆ. ಇದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಏಕೆಂದರೆ

ಉತ್ಪಾದನಾ ವಿಧಾನ ಹಾಗೂ ಉತ್ಪಾದನಾ ವಸ್ತು ಇವುಗಳ ನಡುವಣ ಸಾಮರಸ್ಯವು ಸೃಷ್ಟಿಯ ಚೈತನ್ಯಪೂರ್ಣ ಬೆಳವಣಿಗೆಯ ಒಂದು ಮುಖ್ಯ ಅಂಶವಾಗಿದೆ.*

ವ್ಯಕ್ತಿ ಸಂಬಂಧವನ್ನು ವಿವರಿಸುವ ಚಿತ್ತಾಲರ ಈ ಸಂಕಲನದ ಕವನಗಳು ಮನುಷ್ಯನು ಸೃಷ್ಟ್ಯಾತ್ಮಕ ಅಂಶಗಳಾದ ಪ್ರೇಮ, ನೈತಿಕತೆ, ಸಹಯೋಗ, ಪರಸ್ಪರ ವ್ಯಕ್ತಿತ್ವಗಳ ಬೆಳವಣಿಗೆಗೆ ಕಾರಣವಾಗುವಿಕೆ–ಮುಂತಾದ ನಡಾವಳಿಗಳನ್ನು ಎತ್ತಿ ಹಿಡಿಯುತ್ತವೆ. 'ಹೆಂಡತಿಗೆ' 'ಸುಧೀರ' 'ತಾಯಿ' ಮತ್ತು 'ಅಣ್ಣ' ಈ ಕವನಗಳು ಈ ದೃಷ್ಟಿಯಿಂದ ಗಮನಾರ್ಹವಾದವುಗಳು. ಈ ಕವನಗಳಲ್ಲಿ ವ್ಯಕ್ತಿಗಳು ಎತ್ತಿ ಹಿಡಿಯುವ ಬದುಕಿದ ಧೀರ, ಉದಾತ್ತ ನೆಲೆಗಳನ್ನು ಕವಿಯು ಮುಖ್ಯವೆಂದು ಭಾವಿಸಿದ್ದಾನೆ. ಅಷ್ಟೇ ಅಲ್ಲ–ಅವುಗಳು ಸೃಷ್ಟಿ ಚೈತನ್ಯದ ಮೂಲ ನೆಲೆಗಳೆಂದು ಭಾವಿಸುತ್ತಾನೆ. ಕವನದ ಈ ಗುಣಗಳನ್ನು ಅನಂತಮೂರ್ತಿಯವರು ಗುರುತಿಸಿದ್ದಾರೆ. 'ಇಡೀ ಲೋಕವನ್ನೇ ತನ್ನದೆಂದು ಬಗೆದ ಅಣ್ಣ, ಯೌವನದ ಸಾಹಸದಲ್ಲಿ ಏನನ್ನೂ (ಸಾವನ್ನೂ) ಲೆಕ್ಕಿಸದ ಸುಧೀರ, ಮಮತೆಯಲ್ಲಿ ತನ್ನನ್ನು ಸಂಪೂರ್ಣ ಮಕ್ಕಳಿಗೆಂದು ತೇಯ್ದು ಬಾಳಿದ ತಾಯಿ–ಈ ಮೂವರು ತಮ್ಮ ಜೀವಂತಿಕೆಯಲ್ಲಿ ಸಾವನ್ನು ಮೆಟ್ಟಿ ನಿಂತವರು ? ('ಹರಿವ ನೀರಿದು' ಸಂಕಲನದ ಮುನ್ನುಡಿ.)

ವ್ಯಕ್ತಿತ್ವದ ಇಂಥ ಜೀವಂತಿಕೆಯನ್ನು ವಿವರಿಸುವ ಆಶಯಗಳು ಸೃಷ್ಟಿಯ–ಅಂದರೆ–ನೆಲ, ಮುಗಿಲು, ಮಣ್ಣು ಗಾಳಿಯ ಸಂಬಂಧದಲ್ಲಿ ಅನಿವಾರ್ಯವಾಗಿ ರೂಪುಗೊಳ್ಳುವ ರೀತಿಯನ್ನು ಕವನವು ಚಿತ್ರಿಸುತ್ತ ಹೋಗುವುದು ಇಲ್ಲಿಯ ಕವನಗಳ ಪ್ರಮುಖ ಲಕ್ಷಣವೆನ್ನಬಹುದು. ಈ ಸಂಬಂಧವನ್ನು ಕವಿ ಇಲ್ಲಿ ಉದ್ದೇಶಪೂರ್ವಕವಾಗಿ ತರುತ್ತಾನೆ. ಮತ್ತು ಇಂಥ ಸಂಬಂಧವು ಗಾಢವಾದದ್ದು ಎಂದು ನಂಬುತ್ತಾನೆ. 'ತಾಯಿ' ಹಾಗೂ 'ಹೆಂಡತಿಗೆ' ಈ ಕವನಗಳ ಕೆಲವು ಸಾಲುಗಳನ್ನು ಗಮನಿಸಬಹುದು :

---

* 'ಹರಿವ ನೀರಿದು' ಕವನದ ಆಶಯ ಈಗಾಗಲೇ ಗುರುತಿಸಿರುವ ಹಾಗೆ 'ಬದುಕಿನ ಸಂದರ್ಭದಲ್ಲೇ ನಿಲ್ಲಿಸಬಹುದಾದ ಶಾಶ್ವತಿಯ'ನ್ನು ಕುರಿತದ್ದಾಗಿದೆ. ಧೋರಣೆಯ ದೃಷ್ಟಿಯಿಂದ–ಅಂದರೆ ಜೀವನದ ಆಹ್ವಾನವನ್ನು ಸ್ವೀಕರಿಸುವ ದೃಷ್ಟಿಯಿಂದ ಇದು ಮಹತ್ವದ ವಿಷಯವೇ ಆಗಿದೆ. ಆದರೆ ಕವನದ ಚೌಕಟ್ಟಿನಲ್ಲಿ ಈ ಜೀವನ ದೃಷ್ಟಿಯು ಎದುರು ಹಾಕಿಕೊಂಡಿರುವುದಾದರೂ ಈ ಬದುಕಿನಾಚೆಗಿನ, ಗೂಢ ಹಾಗೂ ನಿರಂತರ ಸಮಸ್ಯೆಯಾದ ಸೃಷ್ಟಿ ರಹಸ್ಯದ ಬಗ್ಗೆ, ಸೃಜನ ಸಂಹಾರಗಳ ಅಜಗರ್ಭದ ಬಗ್ಗೆ, ಒಂದನೆಯದು ಮಾತು, ಬದುಕಿನ ಸಂದರ್ಭದ್ದು. ಇನ್ನೊಂದು–ನಿರಂತರ ಸಮಸ್ಯೆಯಾಗಿ ಉಳಿಯುವ ಅಮೂರ್ತ ನೆಲೆಯದು. ತಮ್ಮ ಪರಸ್ಪರ ಸಂಬಂಧವಿರದ ಗುಣಗಳಿಂದಾಗಿಯೇ ಕಾವ್ಯದ ಚೌಕಟ್ಟಿನಲ್ಲಿಯೂ ಇವೆರಡೂ ಪ್ರತ್ಯೇಕ ನೆಲೆಯವಾಗಿಯೇ ಉಳಿಯುತ್ತವೆ. ಕಾವ್ಯ ತನ್ನ ಬಂಧದಲ್ಲಿ ಬಿಗಿಯನ್ನು ಕಳೆದುಕೊಂಡು ಹೆಚ್ಚು open ಆಗುತ್ತ ಹೋಗುತ್ತದೆ.

‘ಕೆಸರ ಕಸುವಿಗೆ ಹಿಗ್ಗಿ ಗೊನೆ ಹಿಡಿದ ಹೊಂಬಾಳೆ
ಬಚ್ಚಲ ರೊಚ್ಚೆಯಲ್ಲಿ ಕರ್ರಗೆ ಸೊಕ್ಕಿ ಹಬ್ಬಿದ ಬಸಲೆ
ಗರಿ ಚವರಿ ಬೀಸಿ, ಹಿಂಡಿಗೆ ಜೋತು, ಎತ್ತರಕೆ
ತೂಗಿ ತೊನೆಯುವ ತೆಂಗು,
ಸುತ್ತಲೂ
ಬೆಳೆವ ಗಿಡಬಳ್ಳಿಗಳ ಮೈ ರಸದ ಸರಭರ
ಸದ್ದು ಸೊಗಸು
ಮಧ್ಯದಲ್ಲೇ ತಾಯಿ ! (ತಾಯಿ)

ಕವನದಲ್ಲಿಲ್ಲ ಜೀವದ ಪೋಷಣೆ, ಬೆಳವಣಿಗೆಗೆ ಕಾರಣವಾಗುವ ತಾಯಿ ಮಣ್ಣಿಗೆ ಸಂಕೇತವಾಗಿದ್ದಾಳೆ. ‘ನೆಲಕೆ ಸದಾ ಅಂಗಾಲನೂರಿ ಸಂತಸಪಡುವ ಪರಿಪಾಠ’ದವಳಾದ ಹೆಂಡತಿಯು ವ್ಯಕ್ತಿತ್ವವನ್ನು ಪೋಷಣೆ ಮಾಡುವ ಸತ್ವವುಳ್ಳವಳೇ ಆಗಿದ್ದಾಳೆ.

‘ನಾನೂ ನಿಂತೆ ಭದ್ರ ಅಡಿಯನ್ನೂರಿ ಧರೆಗೆ–ಬೆಳೆದೆ
ಅಂಗುಷ್ಠದಿಂದ ಮಸ್ತಕದ ಪರ್ಯಂತವೂ ನೆಲದ ಪೋಷಣೆ ಹೀರಿ’ (ಹೆಂಡತಿ)

ಎನ್ನುವ ಕವನದ ಸಾಲು ವ್ಯಕ್ತಿತ್ವವು ಸೃಷ್ಟಿಯ ಒಂದಂಗವಾಗಿ ಬೇರುಗೊಂಡ ಸ್ವರೂಪವನ್ನೇ ತೋರಿಸುತ್ತದೆ.

ಸೃಷ್ಟಿಯು ಚೈತನ್ಯವನ್ನು ಹೊತ್ತ ಜೀವಗಳು ಅದರ ಗುಣವನ್ನು ಪಡೆದಿರುವ ಸಾಂಕೇತಿಕ ನೆಲೆಯನ್ನು ಅನಂತಮೂರ್ತಿಯವರು ಗುರುತಿಸಿದ್ದಾರೆ. ‘ಹೆಂಡತಿ ನೆಲಕೇ ಸದಾ ಅಂಗಾಲನೂರಿ ಸಂತಸಪಡುವ ಪರಿಪಾಠದವಳು, ಸುಧೀರ–ಆಕಾಶ ಪರವಶ ಜೀವ, ಮಣ್ಣಿನ ಕಂಪನ್ನು ನೆನಪಿಗೆ ತರುವವಳು ತಾಯಿ, ಅಣ್ಣ ; ಬೆಂಕಿಯಂತೆ ಉರಿದು ನಿಂತವನು, ಮಣ್ಣು, ಬೆಂಕಿ, ಗಾಳಿ–ಹೀಗೆ ಈ ಪದ್ಯಗಳಲ್ಲಿ ಸಾಂಕೇತಿಕವಾಗಿದೆ’ ಎಂದು ಅವರು ಕವನಗಳನ್ನು ಗ್ರಹಿಸಿರುವ ರೀತಿಯು ಯಥಾರ್ಥವಾಗಿಯೇ ಇದೆ.

ಸೃಷ್ಟಿಯು ಚೈತನ್ಯದ ಆಶಯಗಳನ್ನು ಹೊತ್ತು ಮನುಷ್ಯ ಇಲ್ಲಿ ಅದರ ಒಂದು ಭಾಗವಾಗಿಯೇ ಈ ಕವನ ಸಂಕಲನದ ಕವನಗಳಲ್ಲಿ ರೂಪುಗೊಳ್ಳುತ್ತಾನೆಂಬುದನ್ನು ಗಮನಿಸಬಹುದು. ಒಂದರ್ಥದಲ್ಲಿ ಪಂಚದ್ರವ್ಯಗಳಿಂದೊಡಗೂಡಿದ ಕಾಲಾತೀತ ಸೃಷ್ಟಿ, ದೇಹದ ಸೃಷ್ಟಿ, ಹಾಗೂ ಕಾವ್ಯದ ಸೃಷ್ಟಿ, ಇಲ್ಲಿ ಒಂದಕ್ಕೊಂದು ಪರಸ್ಪರ ಪೂರಕವಾಗಿರುವುದನ್ನು ಗಮನಿಸಬಹುದಾಗಿದೆ. ಕವನಗಳ ಹೋಲಿಕೆಯ ದೃಷ್ಟಿಯಿಂದ ಹೇಳುವುದಾದರೆ– ವರ್ತಮಾನದಲ್ಲಿ ಸಾವು, ನಾಶವನ್ನು ವಾಸನೆಯನ್ನಾಗಿಟ್ಟುಕೊಂಡ ಅಣ್ಣ, ಸುಧೀರ, ತಾಯಿ, ಈ ಕವನಗಳಿಗಿಂತ ಮಣ್ಣಿನಲ್ಲೂರಿ ಬೆಳೆಯುವ ಹಾಗೂ ಪೋಷಿಸಿ ಬೆಳೆಸುವ–ಚೈತನ್ಯದ ಗುಣವನ್ನು ವಿವರಿಸುವ ‘ಹೆಂಡತಿಗೆ’ ಕವನವು ಈ ಸಂಕಲನದಲ್ಲಿ ನಾನು ಹೆಚ್ಚು ಮೆಚ್ಚಿದ ಕವನವಾಗಿದೆ.

4

'ಸಂಪರ್ಕ' ಕವನ ಸಂಕಲನದಲ್ಲಿ 'ಹರಿವ ನೀರಿದು' ಸಂಕಲನದ ಕವನಗಳಲ್ಲಿ ರೂಪುಗೊಂಡಿದ್ದ ದೇಹದ ಸೃಷ್ಟ್ಯಾತ್ಮಕ ಶಕ್ತಿಯ ಬಗೆಗಿನ ಅತ್ಯುತ್ಸಾಹ, ಅದನ್ನು ಆಶಾಭಾವ ಕವಿಗೆಇರುವಂತೆ ಕಂಡುಬರುವುದಿಲ್ಲ. 'ಕಾಮಸೂತ್ರ' 'ತಾಯಿ', 'ಹೆಂಡತಿ' 'ಅಣ್ಣ' ಮುಂತಾದ ಕವನಗಳಲ್ಲಿ ಕಾಣುತ್ತಿದ್ದ ದೇಹದ, ಮನುಷ್ಯ ಚೈತನ್ಯ ಸ್ವರೂಪದ ಲವಲವಿಕೆ ಇಲ್ಲಿ ಇಲ್ಲವಾಗಿದೆ. ಕವನದ ನಾಯಕ ಇಲ್ಲಿ ದೇಹವನ್ನು ಘಾಸಿಗೊಳಿಸಿರುವ ನೇರ ಆಘಾತಕ್ಕೆ ಒಳಗಾಗಿದ್ದಾನೆ. ಕಾಲ ಬಂದೆರಗುವ ಪ್ರತೀಕ್ಷೆಯಲ್ಲಿ- ಮೈತತ್ತರ ನಡುಗಿಸುವ ಅನುಭವವನ್ನು ತಾನೇ ಸ್ವಂತ ಅನುಭವಿಸುತ್ತಿದ್ದಾನೆ. ಈ ಕವನ ಸಂಕಲನದ ಬಹುಪಾಲು ಕವನಗಳಲ್ಲಿ ಆತಂಕ, ಭೀತಿ, ಆಘಾತಗಳ ಸ್ಥಿತಿಯು ಆವರಿಸಿದೆ. 'ದುಃಖಗೀತ' ಕವನದಲ್ಲಿ ಹೇಳಲಾದ 'ಜೀವಕ್ಕೀ ಘಟಸರ್ಪವಾಯಿತೀ ದೇಹ' ಎನ್ನುವ ವಿಷಾದ ಭಾವ ಇಲ್ಲಿಯ ಕವನಗಳಲ್ಲೂ ಮೂಡಿದೆ. ಆದರೆ ಅಲ್ಲಿಯ ಸಾವಿನ ಹಾರೈಕೆ ಇಲ್ಲಿ ಎಲ್ಲೂ ಇಲ್ಲದಿರುವುದು ಅತ್ಯಂತ ಮುಖ್ಯವಾದ ವಿಷಯವಾಗಿದೆ.

'ಕುಸಿದ ಕಂಬಿಗೆ ಪ್ರಾಣ ಮೊಳೆವ ಸುಳಿವೇ ಇಲ್ಲ.
ಮುದ್ದೆ ದೇಹದಿ ಮತ್ತೆ ಭಯವು ಹುಟ್ಟಿ,
ನರನಾಡಿಯಲ್ಲಿಳಿದ ನಡುಕ ನಿಲ್ಲದ ಮೊಳಗ
ದಯ್ಯೋ ಎಲ್ಲೂ ಅಭಯ ಸಾರುವ ಧ್ವನಿ
ಕೂಗಿಕೊಂಡರೂ ಮತ್ತೆ ರೇಗಿಕೊಂಡರೂ ಕೊನೆಗೆ
ಬಂದಪ್ಪಳಿಸುವುದು ನನ್ನದೇ ಮಾರ್ದನಿ' (ಆಘಾತ)

ಹಿಂದೆ ನೆಲಬಾನುಗಳ ಅರ್ಥಪೂರ್ಣ ಸಂಬಂಧವನ್ನು ಪಡೆದಿದ್ದ ದೇಹ ಈಗ ಅದನ್ನು ಅರ್ಥಪೂರ್ಣಗೊಳಿಸುವ ನೆಲೆಯಲ್ಲಿ ಇಲ್ಲ.

'ನೆಲಬಾನುಗಳ ನಿರರ್ಥಕ ತೆಕ್ಕೆಯಲಿಲ್ಲ
ಸಿಕ್ಕುಬಿದಿದ್ದೇನೆ. ಕೊನೆಯು ಎಂದು
ಮೈ ತಡವಿ ಮಂಪರಿಸಿ ಮ್ಲಾನಗ್ಲಾನಿಯ ತಂದು
ಎಚ್ಚರವೆ ಬರದ ಸುಖನಿದ್ದೆ ಬಂದು (ಆಘಾತ)

ಎಂದು ವಿವರಿಸುವ ಸಾಲುಗಳು ಕಾಲದ ಹೊಡೆತವು ದೇಹದ ಮೇಲೆ ಮಾಡಿದ ಆಘಾತಕ್ಕೆ ತತ್ತರಿಸಿರುವುದನ್ನೇ ಹೇಳುತ್ತದೆ. ದೇಹದ ಚೈತನ್ಯಕ್ಕೆ ನೆಲಬಾನುವಿನ ಸಂಬಂಧ ನಿರರ್ಥಕವಾಗಿರುವುದನ್ನು ಕವನವು ಸೂಚಿಸುತ್ತಿದೆ. ಈ ನಿರಾಶೆಯ ಹಿನ್ನೆಲೆಯಲ್ಲಿ ದೇಹದ ಚೈತನ್ಯವನ್ನು ಉಡುಗಿಸಿದಂಥ ಸಂಗತಿಯ ಬಗ್ಗೆ ಅತೀವ ಕೋಪ, ಸಿಟ್ಟು ರೂಪುಗೊಂಡಿವೆ. ಯಾಕೆಂದರೆ ಬದುಕಿನ ಅರ್ಥಪೂರ್ಣ ನೆಲೆಗಳನ್ನು ಸಾಧಿಸ ಬೇಕೆನ್ನುವ ಜೀವಕ್ಕೀ ಇಲ್ಲಿ ಅದು ಸಾಧ್ಯವಾಗದ ಹಾಗೆ ಮಾಡಿದ ವಾತಾವರಣವು ರೂಪುಗೊಂಡಿದೆ. ದೇಹವು ಇಲ್ಲಿ ಸೃಷ್ಟಿಯ ಸಂಬಂಧದಿಂದ ದೂರಸರಿದಿದೆ. ಇವೆರಡೂ

ತಮ್ಮ ಗಾಢ ನಂಟನ್ನು ಇಲ್ಲಿ ಕಳೆದುಕೊಂಡಿವೆ. ಆದ್ದರಿಂದಲೇ ಕಾವ್ಯದ ಇಲ್ಲಿಯ ವ್ಯಕ್ತಿಗೆ ಒಂದು ರೀತಿಯ ನಿಸ್ಸಹಾಯಕತೆ ಮೂಡಿ ಬಂದಿದೆ.

'ಯಾವರ್ಥಪೂರ್ಣ ಸಂಕೇತಗಳ ಯೋಜಿಸಲಿ
ಈ ಅನರ್ಥದ ಮೂರ್ತಗೊಳಿಸೆ
ಯಾವಸಮರ್ಥ ಪ್ರತಿಮಾ ವಿಧಾನ?
ಮಾತು ಸಾಲದು ಇಲ್ಲಿ ನಾಲಿಗೆಯು ಸೋಲುತ ಬಂತು.
ಬದುಕಾಗುತಿದೆ ಅರ್ಥಹೀನ'

ಈ ಮಾತುಗಳಲ್ಲೇ ನಿರಾಶೆಯ ಭಾವದ ಸಂಗಡವೇ, ಅರ್ಥಪೂರ್ಣ ನೆಲೆಗಳನ್ನು ಹುಡುಕುವ, ಗ್ರಹಿಸುವ ಕಡೆಗೆ ಒಲವು ಇರುವುದನ್ನು ಕವನ ಸೂಚಿಸುತ್ತಿದೆ. ಇದೇ ಸಂಶಯದ ಧಾಟಿಯು 'ಕೃಷಿ' ಕವನದಲ್ಲೂ ಮುಂದುವರಿದಿರುವುದನ್ನು ನೋಡಬಹುದು. 'ಇಂತಹ ಇಳಿಗಾಲದಲ್ಲೂ, ಉಳಿದ ಅಲ್ಪಕಾಲದಲ್ಲೂ ಮತ್ತೆ ಬೆಳಸ ಬೆಳೆಯೆನೆ?.... ಬಂಜೆ ಬಂಜರೆಂದ ನೆಲವೆ ಒಳಗಿನೊಳಗೆ ಮರಳಿ ಪಡೆದು ಒಳಸೆಲೆಗಳ ರಸವನು, ತನ್ನ ಮೂಲ ಕಸುವನು, ಹಾಲ್ದೆನೆಗಳು ತುಂಬಿ ತೊನೆವ ಭರ್ತಿ ಪೈರ ನಿಲಿಸೆನೆ?' ಎನ್ನುವ ಪ್ರಶ್ನೆಗಳ ಸರಮಾಲೆಯಾಗಿ ರೂಪುಗೊಳ್ಳುವ ಜೀವದ ಬಯಕೆ ಪ್ರಶ್ನೆಯಾಗಿಯೇ ಉಳಿದಿದೆ. 'ಬಾಳಕೃಷಿಯ ರಸಾಯನಿಯ ಗುಟ್ಟನೆಲ್ಲ ಬಲ್ಲರಾರು? ಪಂಚಭೌತದೀ ಪವಾಡದಲ್ಲಿ ನಮ್ಮದೆಷ್ಟು ಪಾಲು?'– ಎನ್ನುವ ಪ್ರಶ್ನೆಗಳೂ ಸಹ ಜೀವಕ್ಕೆ ಇಂಥ ಕ್ರಿಯೆ, ಸೃಷ್ಟಿಯೊಡನೆ ಸಂಬಂಧ ಸಾಧ್ಯವಾಗುವ ಈ ನೆಲೆಯನ್ನು–ಸೃಷ್ಟಿಯನ್ನು ಸಾಧ್ಯಮಾಡುವ ಪಂಚದ್ರವ್ಯಗಳ ಗೂಢತೆಗೆ ಬಿಡಲಾಗಿದೆ. ದೇಹ–ಜೀವದ ಧೃಡ ವಿಶ್ವಾಸ ಇಲ್ಲಿ ಕಾಣುವುದಿಲ್ಲ. 'ಸಂಪರ್ಕ' ಕವಿತೆಯಲ್ಲಿಯಂತೂ ಡಬ್ಬದಲ್ಲಿದ್ದ ಮಣ್ಣಿನಲ್ಲಿ ಮೊಳಕೆಯೊಡೆಯುವ ಸೃಷ್ಟಿಕ್ರಿಯೆಯ ಚೈತನ್ಯವನ್ನು–ಪರಕೀಯನಾಗಿ, ದೂರ ಕುಳಿತವನಾಗಿ ನಾಯಕನು ನೋಡುತ್ತಾನೆ.

ಇಷ್ಟಕ್ಕೆ ಕವನಗಳ ಆಶಯಗಳು ನಿಂತಿದ್ದರೆ–ಆತ್ಯಂತ ಪರಿಣಾಮಕಾರಿಯಾದ ದುರಂತ ನೆಲೆಗಳನ್ನು ಕವನಗಳು ತಮ್ಮ ಒಡಲಲ್ಲಿ ಹದುಗಿಸಿಕೊಂಡಿವೆ ಎಂದು ಮಾತ್ರ ಹೇಳಬಹುದಾಗಿತ್ತು. ಹಾಗೆ ನೋಡಿದರೆ ಅನುಭವದ ಆಘಾತಕ್ಕೆ ನೇರ ತಮ್ಮನ್ನು ತೆರೆದುಕೊಳ್ಳುವ ಈ ಕವನಗಳು ದುರಂತದ ಸನ್ನಿವೇಶವನ್ನು ತೆರೆದಿಡುವುದು ಮಹತ್ವದ ಸಾಹಸವೇ ಆಗಿದೆ. ಆದರೆ ಚಿತ್ತಾಲರ ಇಲ್ಲಿಯ ಕವನಗಳಲ್ಲಿ ಇನ್ನೂ ಒಂದು ಹೊಸ ಹೆಜ್ಜೆ ಇದೆ. ದೇಹದ ನಿಸ್ಸತ್ವಗೊಳ್ಳುವ ಆಘಾತವನ್ನು ಎದುರಿಸುವ ಕಾವ್ಯದ ನಾಯಕನಿಗೆ ಇಲ್ಲಿ ಚೈತನ್ಯದ ಮೂಲಸತ್ವವಾದ ಸೃಷ್ಟಿಯ ಬಗ್ಗೆ ಹೊಸ ಕಾಳಜಿಯೊಂದು ತೀವ್ರವಾಗಿ ರೂಪುಗೊಳ್ಳುತ್ತಿದೆ. ಸೃಷ್ಟಿಯ ನೆಲೆಗಳು, ಕಾವ್ಯದಲ್ಲಿ–ವ್ಯಕ್ತಿಗಳ ಚೌಕಟ್ಟಿನಿಂದ–ಸಮಷ್ಟಿಯ ಬದುಕನ್ನು ಕುರಿತಾದ ಆಲೋಚನೆಯ ಕಡೆಗೆ ಸಾಗಲ್ಪಡುತ್ತವೆ. ದೇಹ ಚೈತನ್ಯವು ಘಾತಗೊಂಡ ಸಂದರ್ಭದಲ್ಲಿ ಸೃಷ್ಟಿಯ ಬಗೆಗಿನ

ಈ ಹಂಬಲ ಅತ್ಯಂತ ಧೈರ್ಯ, ಸಾಹಸದ ನಿಲುವೇ ಆಗಿದೆ. ಸೃಷ್ಟಿಯ ಬಗೆಗಿನ ಇಂಥ ಕಾಳಜಿಗಳು ಕವಿಯ ತೀವ್ರತೆಯನ್ನು ಹೇಳುವುದಷ್ಟೇ ಅಲ್ಲ- ಕಾವ್ಯ ಧೋರಣೆಯ ಹಾಗೂ ಬಂಧದ ಸತ್ವವನ್ನು ಹೆಚ್ಚಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ.

ನೆಲ-ಬಾನುವನ್ನೊಳಗೊಂಡ ಕಾಲಾತೀತವೆಂದೆನಿಸುವ ಸೃಷ್ಟಿ ಹಾಗೂ ಅದರೊಡನಿರುವ ಸಮಷ್ಟಿಯು ಮಾನವ ಪ್ರಗತಿಯ ಹೆಸರಿನಲ್ಲಿ ನಾಶವಾಗಿ ಹೋಗುವ ಭಯ, ಅಣುಸ್ಫೋಟವು ಸೃಷ್ಟಿ-ಸಮಷ್ಟಿಯನ್ನು ಇಲ್ಲವಾಗಿಸುವ ಕ್ರಿಯೆಯನ್ನು ಕವನವು ವಿರೋಧಿಸುತ್ತದೆ.

ಭಯಾಕಾರ ರೇಣುಭಸ್ಮದ ಅಣಬೆ
ಆಮೇಲೆ
ತೆರೆ ಮೇಲೆ ತೆರೆ ಬಡಿದು
ಸಿಡಿಮಿಡಿದ ನೆಲದದುರು
ಕೊನೆಗೊಮ್ಮೆ ಗರ್ಜನೆಯೋ, ಚೀತ್ಕಾರವೋ, ವಿಕಾರಕೂಗೋ
ತಿಳಿಯದ ದೇಹ ಜೀವ ಭೇದಕನಾದ' (ಒಡಕು)

ಕವನದ ಈ ಸಾಲುಗಳು ಸೃಷ್ಟಿಯ ಮೂಲಸತ್ವಕ್ಕೆ ಕೊಡಲಿ ಹಾಕುವ ಕ್ರಿಯೆಯ ಕಠೋರತೆಯನ್ನು ವಿವರಿಸುತ್ತವೆ. 'ಇದು ಒಳಿತಿಗಲ್ಲ, ನೆಲಗಟ್ಟನೇ ಜಡಿದೊಡೆದು ಅಡಿಗಲ್ಲಿನೊಳಗುಟ್ಟನೊಳಕು ಬೆದಕುವ ಚಾಳಿ.... ಕುರುಡು ಕೈಗಳು ದುಡುಕಿ-ನಿಯತಿಯುರಕೂ ಥಾಳಿ' ಎನ್ನುವ ಆತಂಕವನ್ನು ಕವಿಯು ವ್ಯಕ್ತಪಡಿಸುತ್ತಾನೆ.

ದೇಹ ಸೃಷ್ಟಿಯ ಒಡಲಿನಲ್ಲೇ ಸಾವಿನ ಎಳೆಯು ರೂಪುಗೊಳ್ಳುವ ಸಂಗತಿ ಕವಿಗೆ ವಿಷಾದವೆನಿಸಿರುವುದಾದರೂ ಇದು ಅದರ ನಿಯತಿಯೇ ಆಗಿದೆ. ಆದರೆ ದೇಹವನ್ನು-ಜೀವವನ್ನು ಸೃಷ್ಟಿಯ ಕಡೆಗೆ ಮುಖ ಮಾಡಿಸಬೇಕೆನ್ನುವ ಆಶಯವನ್ನು ಹೊಂದಿದ ಕಾವ್ಯದ ನಿಲುವುಗಳು ಮನುಷ್ಯನು ಸೃಷ್ಟಿಯ ಅಂತ್ಯವನ್ನೇ ಮಾಡಲು ಉದ್ಯುಕ್ತನಾಗಿರುವುದನ್ನು ತೀವ್ರವಾಗಿ ವಿರೋಧಿಸುತ್ತವೆ. ಏಕೆಂದರೆ ಒಟ್ಟಾರೆ ನಿಯತಿಯ ಸ್ವರೂಪವನ್ನೇ ನಿರ್ನಾಮ ಮಾಡುವ ಕುರೂಪ ಲಕ್ಷಣದ ಕ್ರಿಯೆಗಳು ಇವುಗಳಾದ್ದರಿಂದ. ಆದ್ದರಿಂದಲೇ ಕವಿ ಇಲ್ಲಿ ಸೃಷ್ಟಿಯ ಪರವಾಗಿ ಇದ್ದಾನೆ.

ದಂಡೆತ್ತಿ ಬರಲಿ ಹುಲ್ಲಿನ ಹಸಿರು ಸಾಮ್ರಾಜ್ಯ
ದಂಡೆತ್ತಿ ತೊರೆವ ಕೆಚ್ಚಲುಗಳ ಹಿಂಡು
ದಂಡೆತ್ತಿ ಹಾಲು ಹೊನಲಾಗಿ ತಬ್ಬುತ ಬರಲಿ
ಸಮರಾಗ್ನಿ ನಂದಿಸಲಿ ಕ್ಷೀರ ಸಿಂಧು

ಸೃಷ್ಟಿಯ ಸಂಕೇತವಾದ ಹುಲ್ಲು, ಪೋಷಣೆ ಪಡೆವ ಮತ್ತು ಅಮೃತವನ್ನೀವ ಕೆಚ್ಚಲುಗಳು ಇಲ್ಲಿ ಜೀವಪರವಾದವುಗಳು. ಇವುಗಳನ್ನು ಸಾವು-ನೋವುಗಳ ವಿರುದ್ಧ ಶಕ್ತಿ

ಯೆಂದು ಉದ್ದೇಶಪೂರ್ವಕವಾಗಿ ಕವಿ ಬಳಸುತ್ತಿದ್ದಾನೆ. ಸೃಷ್ಟಿಯ ಪರವಾದಂಥ ಇಂಥ ನಿಲುವುಗಳು ಕವಿಗೆ ಮೂಲಭೂತವಾಗಿ ಸೃಷ್ಟಿ ಚೈತನ್ಯದ ಬಗ್ಗೆ ಇರುವ ಅದಮ್ಯವಾದ ಆಶಯುವನ್ನು ಎತ್ತಿ ಹೇಳುತ್ತವೆ. ಆದ್ದರಿಂದಲೇ ಕಾವ್ಯದ ಚೌಕಟ್ಟು-ಸ್ವರೂಪಕ್ಕೂ ಹೊಸ ಆಯಾಮ, ಸತ್ವ ದಕ್ಕಿದಂತಾಗಿದೆ.

---

ನವೋದಯ ನೆಲದಲ್ಲಿ ಬೇರೂರಿಯೂ ನವ್ಯದ ಜೀವಸತ್ವವನ್ನು ಜೀರ್ಣಿಸಿಕೊಂಡು ಹೊಸಗನ್ನಡ ಕಾವ್ಯದ ಕಸುವು-ಕೆಚ್ಚುಗಳನ್ನು ಹಿಗ್ಗಲಿಸಿದ ಮಹತ್ವದ ಕವಿ ಗಂಗಾಧರ ಚಿತ್ತಾಲರು. ಯಾವುದೇ ಬಗೆಯ ಭಾವವಿವಶತೆ-ಭಾವೋದ್ರೇಕಗಳಿಗೆ ಬಲಿಯಾಗದೆ ಸದಾ ವೈಚಾರಿಕತೆ ವಿವೇಕಪರತೆಗಳಿಗೇ ಹೃನ್ಮನ ತೆರದವರು ಅವರು. ರಾಷ್ಟ್ರವಿಭಜನೆಯ ಕಾಲದ ಕೋಮುಗಲಭೆಯ ದುರಂತಕ್ಕೆ ಸ್ಪಂದಿಸುತ್ತ "ನೆಲದ ಒಂದು ತುಂಡಿಗೇಕೊ! ತಾಯಿ ಎಂದು ಸಾಯುಬೇಕೊ!" ಎಂದು ಉದ್ಗರಿಸುವ ಮೂಲಕ ಪರಿಶುಭ್ರ ಮಾನವೀಯತೆಯನ್ನೆ ಮೆರೆದವರು; ಬಾಳು-ಬದುಕಿನ ಅನುಭವದ ಎಳೆ-ಎಳೆಯನ್ನೂ ಹಿಂಜಿ ಹಿಂಜಿ, ಮನುಕುಲದ ಇತಿಹಾಸದ ಬೆಳಕಿನಲ್ಲಿ ಪರಿಶೋಧಿಸಿ ಜೀವನದ ಅನ್ವೇಷಣೆಯನ್ನು ನಡೆಯಿಸಿದವರು. ಇಂಥ ಚೇತನ ವಿಶೇಷದ ಕವಿ ಚಿತ್ತಾಲರ ಅಭಿಜಾತಪ್ರತಿಭೆಯ ಪರಿಪಾಕವೇ 'ಮನುಕುಲದ ಹಾಡು'

ಎಂ. ಅಕಬರ ಅಲಿ

ಸ್ವಸ್ತಿ

---

# ಆಲೋಕ

## 'ಅಂಕಣ'ದ ಲೇಖನಕ್ಕೆ 'ಪಡಿಗಳ್' ಪ್ರತಿಕ್ರಿಯೆ

['ಅಂಕಣ' 4.4ರಲ್ಲಿ ಪ್ರಕಟವಾದ ಕೆ. ವಿ. ನಾರಾಯಣ ಅವರ 'ಇತ್ತೀಚಿನ ಕನ್ನಡ ಸಾಹಿತ್ಯ ವಿಮರ್ಶೆ: ಅನ್ಯ ಪ್ರಭಾವಗಳು, ಸಾಧನೆಗಳು' ಲೇಖನ ತಮಿಳಿನ ಕಿರುಪತ್ರಿಕೆ 'ಪಡಿಗಳ್'ನ 18ನೇ ಸಂಚಿಕೆಯಲ್ಲಿ ಅನುವಾದಗೊಂಡು ಪ್ರಕಟವಾಯಿತು. [ಅನು: ಡಾ|| ಶಿವಷಣ್ಮುಗವ್] ಅನುವಾದಿತ ಲೇಖನಕ್ಕೆ ಅದೇ ಪತ್ರಿಕೆಯಲ್ಲಿ ಬಂದ ಪ್ರತಿಕ್ರಿಯೆಯೊಂದನ್ನು ಇಲ್ಲಿ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಲಾಗುತ್ತಿದೆ. [ಕನ್ನಡಕ್ಕೆ ಅನುವಾದ: ಡಾ|| ಶಿವಷಣ್ಮುಗವ್]. ಪ್ರತಿಕ್ರಿಯೆಯ ಮೊದಲಭಾಗ ಮೂಲ ಲೇಖನದ ಸಾರಾಂಶವನ್ನು ಗ್ರಹಿಸುವ ಉದ್ದೇಶ ಹೊಂದಿದೆ. ಹಾಗಾಗಿ ಈ ಭಾಗವನ್ನೂ ಇಲ್ಲಿ ಬಿಡಲಾಗಿದೆ.]

ಶ್ರೀಯುತರಾದ ಕೆ. ವಿ. ನಾರಾಯಣ, ಎಚ್. ಎಸ್. ರಾಘವೇಂದ್ರರಾವ್, ಡಿ. ಆರ್. ನಾಗರಾಜ್ ಮುಂತಾದ ಯುವ ಕನ್ನಡ ವಿಮರ್ಶಕರು 'ಭಾರತೀಯ ಪರಂಪರೆ' ಎಂಬ ಏಕತ್ರಗೊಂಡ ಪರಿಕಲ್ಪನೆಯನ್ನು ಬೇರೆಬೇರೆ ರೀತಿಯಲ್ಲಿ ನಿರಾಕರಿಸಿ ದೇಶೀಯ ಪರಂಪರೆಯನ್ನು ಎತ್ತಿ ಹೇಳುತ್ತಾರೆ. ಇವರೆಲ್ಲ ಕನ್ನಡ ಅಧ್ಯಾಪಕರು. ಆ ಕಾರಣಕ್ಕಾಗಿಯೇ ಅವರು ದೇಶೀಯ ಪರಂಪರೆಯ ಪ್ರತಿಪಾದಕರೆಂದು ಹೇಳಲಾಗದು.

ತಮಿಳುನಾಡಿನ ವಿಶ್ವವಿದ್ಯಾಲಯಗಳ ತಮಿಳು ಸಾಹಿತ್ಯ ಇಲಾಖೆಗಳಲ್ಲಿ ಹೊಸ ಬಗೆಯ, ಸೃಜನಶೀಲ ಚಿಂತನೆ ಅಷ್ಟಾಗಿ ಇಲ್ಲ. ಮಧುರೈ, ಮದರಾಸು, ಅಣ್ಣಾಮಲೈ ವಿಶ್ವವಿದ್ಯಾಲಯಗಳ ತಮಿಳು ವಿಭಾಗಗಳ ಉಪನ್ಯಾಸಕರು ಯಾರೂ ಸಾಹಿತ್ಯಿಕ ಕಿರು ಪತ್ರಿಕೆಗಳಲ್ಲಿ ಬರೆಯುವುದಿಲ್ಲ. ತಮಿಳಿನ ಮುಖ್ಯ ಚಿಂತನಾ ಪ್ರವಾಹ ಈ ವಿಭಾಗಗಳಿಂದ ಹೊರಗೆ ಇರುವವರಿಂದ ಬೆಳೆಯುತ್ತಿದೆ. ತಮಿಳು ಮತ್ತು ಕನ್ನಡಕ್ಕೆ ಒಂದು ಮುಖ್ಯ ವ್ಯತ್ಯಾಸವಿದೆ. ಅದೆಂದರೆ ಸಾಹಿತ್ಯಿಕವಾದ ಹೊಸ ಚಿಂತನೆಗಳು ತಮಿಳಿನಲ್ಲಿ ಸೃಜನಶೀಲ ಸಾಹಿತ್ಯ ಪರಂಪರೆಯ ಮೇಲೆ ಏನೂ ಪರಿಣಾಮವನ್ನೂ ಬೀರುವುದು ಸಾಧ್ಯವಾಗಿಲ್ಲ.

ತಮಿಳು ವಿಭಾಗಗಳಿಂದ ಹೊರಗೆ ಇದ್ದು ಸಾಹಿತ್ಯ ವಿಮರ್ಶೆ ಮಾಡಿದ ಕೆಲವು ಮುಖ್ಯರು: ಸಿ. ಸು. ಚೆಲ್ಲಪ್ಪ, ಕನಸು, ವೆಂಕಟ್ಸಾಮಿ ನಾಥನ್ ಮುಂತಾದವರು [ನಕುಲನ್, ಧರ್ಮು ಶಿವರಾಮು ಇವರ ಬರಹಗಳು ಸಂಕಲನಗೊಂಡು ಪ್ರಕಟವಾದ ಹೊರತು ಅವರ ಬಗ್ಗೆ ಏನೂ ಹೇಳಲಾಗದು] ಸಂಸ್ಕೃತ, ಅಖಿಲ ಭಾರತೀಯ ಪರಂಪರೆಗಳೊಡನೆ ಪಾಶ್ಚಾತ್ಯ ಪ್ರಭಾವಗಳಿಗೆ ಒಳಗಾದ ಸಾಹಿತ್ಯ ಮೀಮಾಂಸೆಯನ್ನು ಇವರೆಲ್ಲ

ರೂಪಿಸಿದ್ದಾರೆ. ಮಾರ್ಕ್ಸ್‌ವಾದದ ಬಗ್ಗೆ ಒಲವಿರುವ ಜ್ಞಾನಿಯವರು ಭಾರತೀಯ ಪರಂಪರೆಗೆ ಸೇರಿದ ವಿಶ್ಲೇಷಣೆಗಳನ್ನೂ ತಮ್ಮ ವಿಮರ್ಶೆಗೆ ಹಿನ್ನೆಲೆಯಾಗಿ ಇರಿಸುತ್ತಾರೆ. ದ್ರಾವಿಡಕಜಗಂ ಪರಂಪರೆಗೆ ಸೇರಿದ ಅಂಶನ್ ಕುಮಾರ್ ಸನಾತನವಾದುದನ್ನು ಆಧರಿಸಿದ ತಮ್ಮ ಸಾಹಿತ್ಯಕ ತತ್ತ್ವಗಳಲ್ಲಿ ಪಾಶ್ಚಾತ್ಯ ವೈಜ್ಞಾನಿಕ ಚಿಂತನೆಗಳನ್ನು ನಿರಾಕರಿಸುತ್ತಾರೆ. ಮಾರ್ಕ್ಸ್‌ವಾದಿಗಳಾದ ನಾ. ವಾನಮಾಮಲೈ, ಕ. ಕೈಲಾಸಪತಿ ಇಬ್ಬರೂ ಆಂಗ್ಲ ಸಾಹಿತ್ಯಾನುಭವ ಹಾಗೂ ಪಾಸಿಟಿವಿಸ್ಟ್ ಪರಿಕಲ್ಪನೆಗಳನ್ನು ಬಳಸು ವರು. ಇವರಂತೆ ಮಾರ್ಕ್ಸೀಯ ಸಾಹಿತ್ಯ ವಿಮರ್ಶೆಯನ್ನೂ ರೂಢಗೊಳಿಸಲು ಯತ್ನಿಸುತ್ತಿರುವ ಎಸ್. ವಿ. ರಾಜದುರೈಯವರು ಅನ್ಯ ಪ್ರಭಾವಗಳು ಅವಶ್ಯವೆನ್ನು ತ್ತಾರೆ. ರಾಜ್ ಗೌತಮನ್, ನಾಗಾರ್ಜುನನ್ ತಮಿಳವನ್ ಮುಂತಾದವರಲ್ಲಿ ಸ್ಟ್ರಕ್ಚರಲಿಸಂನ ಪ್ರಭಾವ ಕೂಡ ಇದೆ.

ಈ ಹಿನ್ನೆಲೆಯಲ್ಲಿ ಶ್ರೀ ನಾರಾಯಣ ಅವರ ಲೇಖನಕ್ಕೆ ಇದು ಪ್ರತಿಕ್ರಿಯೆ : ಪರಿ ಸರ ಹಾಗೂ ವ್ಯಕ್ತಿ ಇವರಿಬ್ಬರ ಸಂಬಂಧದ ಬಗ್ಗೆ ನಾರಾಯಣ ತಿರಸ್ಕರಿಸುವ ಅಭಿಪ್ರಾಯ ಗಳು ಕನ್ನಡದಲ್ಲಿ ಮಾತ್ರವಲ್ಲದೆ ತಮಿಳಿನಲ್ಲಿಯೂ ಈಚೆಗೆ ತಿರಸ್ಕೃತವಾಗಿವೆ. ಆದರೆ ಸಾಹಿತ್ಯ ವಿಮರ್ಶೆಯಲ್ಲಿ ಕೆಲವರು ರಾಜಕೀಯ ಸಿದ್ಧಾಂತಗಳಲ್ಲಿ ನೆಲೆಗೊಂಡು ಸಾಹಿತ್ಯ ಕೃತಿಗಳನ್ನು ನೋಡುತ್ತಿರುವಂತೆ ತಮಿಳಿನಲ್ಲಿಯೂ ಕೆಲವರಿದ್ದಾರೆ. ಇವರು ಪರಿಸರವೇ ವ್ಯಕ್ತಿಯ ಸ್ವರೂಪವನ್ನು ನಿರ್ಣಯಿಸುವುದೆಂದು ಹೇಳುತ್ತಾರೆ. ಮುಂದಿನ ಪ್ರಶ್ನೆ, ಈಗಾಗಲೇ ಸಾಹಿತ್ಯಕೃತಿಯ ಆಚೆಗೆ ಸಿದ್ಧಗೊಂಡಿರುವ ಸಾಮಾಜಿಕ ದೃಷ್ಟಿಕೋನಗಳು, ತಾತ್ವಿಕ ಅಂಶಗಳು ಕೃತಿಯಲ್ಲಿ ಮೈತಳೆಯುವ ಕ್ರಮವನ್ನು ಕುರಿತಂತೆ ನಾರಾಯಣ್ ತಳೆಯುವ ನಿಲುವುಗಳನ್ನು ನಾವು ಒಪ್ಪುವುದಿಲ್ಲ. ಏಕೆಂದರೆ ಸೃಜನಶೀಲ ಕೃತಿಯಲ್ಲಿ ಈ ದೃಷ್ಟಿಕೋನಗಳು ಯಥಾವತ್ತಾಗಿ ಮೈತಳೆಯುವುದಿಲ್ಲವೆಂದರೂ, ಇವೆಲ್ಲವೂ ಕೃತಿಯ ಹೊರಗಡೆ ಚಲನಶೀಲವಾಗಿರುತ್ತವೆ. ಇವುಗಳನ್ನು ನಿರಾಕರಿಸುವುದು ಆಗದ ಸಂಗತಿ. ಏಕೆಂದರೆ ಕೃತಿಕಾರನು ಸಮಾಜದಲ್ಲಿ ಒಬ್ಬನಾಗಿದ್ದು, ಕೃತಿಯ ಹೊರ ಗಿರುವ ದೃಷ್ಟಿಕೋನಗಳ ಜತೆಗೆ ಅವನಿಗೆ ಸಂಬಂಧವಿದ್ದೇ ಇರುತ್ತದೆ. ಸ್ಟ್ರಕ್ಚರಲಿಸ್ಟರು ಹೇಳುವ ಹಾಗೆ ಕೃತಿಕಾರನು ಕೃತಿಯ ಒಳಗಿನಿಂದ ಹೊರಗೆ, ಕೃತಿಯ ಹೊರಗಿನಿಂದ ಒಳಕ್ಕೆ ಏಕಕಾಲದಲ್ಲಿ ಪ್ರವಾಸಮಾಡುತ್ತಿರುತ್ತಾನೆ. ಇದರಿಂದಾಗಿ ಯಾವನೇ ಲೇಖಕ ನಾಗಲಿ ಆತ ತಮ್ಮ ಹೊರಲೋಕದ ವಿಚಾರಗಳನ್ನು ಕೃತಿಯೊಳಗೆ ಬಳಸುವುದರಲ್ಲಿ ಯಾವ ತಪ್ಪೂ ಇಲ್ಲ. ಆದರೆ ಕೃತಿಯ ಸ್ವರೂಪವನ್ನು ಪರಿಸರವೇ (ಅಂದರೆ ಈ ದತ್ತ ವೈಚಾರಿಕತೆಯೇ) ನಿರ್ಧರಿಸುತ್ತದೆ ಎಂದಾಗ ಮಾತ್ರ ಸಮಸ್ಯೆಯುಂಟಾಗುತ್ತದೆ.

ಇಲ್ಲಿ ನಾರಾಯಣ ಅವರು ಕೃತಿಯ ಹೊರಗೆ ಇರುವ ಚಿಂತನಾಸರಣಿ, ತಾತ್ವಿಕತೆ ಗಳಿಗೆ ಪಾಶ್ಚಾತ್ಯ ಪ್ರಭಾವವೇ ಆಧಾರವಾಗಿವೆ ಎನ್ನುತ್ತಾರೆ. ಬ್ರಾಹ್ಮಣ, ಶೂದ್ರ, ದಲಿತ ಇವರ ಪ್ರಶ್ನೆಗಳಾಗಲೀ, ಮಾರ್ಕ್ಸ್‌ವಾದಗಳಾಗಲೀ, 'ಶಿಕಾರಿ' ಕಾದಂಬರಿ ಯಲ್ಲಿ ಮೂಡಿಬರುವ ಕಾನ್ರಾರ್ಡ್ ಲೊರೆಂಜ್ ಮುಂತಾದವರ ಚಿಂತನೆಯಾಗಲೀ

ಇವೆಲ್ಲವೂ ಸ್ವತಃ ಕನ್ನಡ ಸೃಜನಶೀಲತೆಯ ಮೂಲಕ ಮೈತಳೆದವುಗಳಲ್ಲ ಎನ್ನುತ್ತಾರೆ. ಇದು ಗಮನಾರ್ಹವಾದ ವಿಷಯ. ಇಲ್ಲಿ ನಾರಾಯಣ ಅವರು ಕನ್ನಡ ಪರಂಪರೆಯಿಂದ ಒಂದು ಸಾಮಾಜಿಕ ಚಿಂತನೆಯನ್ನು, ಮನೋವಿಜ್ಞಾನವನ್ನು, ರಾಜಕೀಯ ಶಾಸ್ತ್ರವನ್ನು ಕನ್ನಡ ವಿಮರ್ಶಕರು ಸೃಷ್ಟಿಸಬೇಕೆಂದು ಹೇಳುವಾಗ, ಕೃತಿಯಲ್ಲಿ ತತ್ತ್ವ ಮತ್ತು ಸೃಜನಶೀಲತೆಗಳಿಗೆ ಸಂಬಂಧಿಸಿದ ಸಮಸ್ಯೆಗೆ ಪರಿಹಾರ ಸೂಚಿಸುವಂತೆ ತೋರುತ್ತದೆ. ಆ ಪ್ರಕಾರ ಕನ್ನಡದ ದೇಶೀಯ ಚಿಂತನೆಗಳು ಮಾತ್ರವೇ ಕೃತಿಯಲ್ಲಿ ಸೃಜನಶೀಲವಾಗಿದ್ದು, ಅನ್ಯ ಪ್ರಭಾವಗಳಿಂದ ಬಂದ ಚಿಂತನೆಗಳು ಸೃಜನಶೀಲವಾಗುವುದಿಲ್ಲ ಎಂದಾಯಿತು. ಇದು ಇನ್ನೂ ಚರ್ಚೆಯಾಗಬೇಕಾದ ವಿಷಯ.

ಆದರೆ ಸಮಸ್ಯೆ ಇಲ್ಲಿಗೆ ಮುಗಿಯುವುದಿಲ್ಲ. ಏಕೆಂದರೆ ಕನ್ನಡ ಪರಂಪರೆಗೆ ಸೇರಿದ ಎಲ್ಲವೂ ಸೃಜನಶೀಲವಾಗುವುದಿಲ್ಲ. ಉದಾ. ಗೆ ಕನ್ನಡ ಚಲನಚಿತ್ರಗಳ ಸಂಭಾಷಣೆಯನ್ನು ಸಾಹಿತ್ಯವೆನ್ನಲಾಗದು. ಹಾಗೇನೆ ಈವರೆಗೂ ಬರೆಯಲಾದ ಎಲ್ಲವೂ ಪರಂಪರೆಯ ಅಂಗವಾಗಿವೆ ಎಂಬುದಕ್ಕಾಗಿ ಅವೆಲ್ಲವನ್ನೂ ಸೃಜನಶೀಲವೆಂದು ಮನ್ನಿಸಲಾಗುವುದಿಲ್ಲ.

ಕೊನೆಯ ಮಾತು : ನಾರಾಯಣ ಅವರ ದೇಶೀಯ ಪರಂಪರೆಯ ವಾದವನ್ನು ರೂಢಿಯಲ್ಲಿರುವ ಸನಾತನವಾದಿಗಳ ಚಿಂತನೆಯೊಡನೆ ಇಡಬಾರದು. ಏಕೆಂದರೆ ಸಾರ್ತ್ರ್, ಕಮೂ ಇವರನ್ನು ನಾರಾಯಣ ಒಪ್ಪುತ್ತಾರೆ. ಆದರೆ ಸಂಪ್ರದಾಯವಾದಿಗಳು ಒಪ್ಪುವುದಲ್ಲ. ತಮಿಳಿನಲ್ಲಿ ದೇಶೀಯ ಪರಂಪರೆಯನ್ನು ಎತ್ತಿ ಹಿಡಿಯಲು ಯತ್ನಿಸುವವರು ಸನಾತನವಾದಿಗಳು. ಹಳೆಯದೆಲ್ಲ ಅತ್ಯುತ್ತಮವೆಂದು ಹಠ ಹಿಡಿಯುವವರು. ಇದರಿಂದಾಗಿ ಅಲ್ಲಿ ದೇಶೀಯ ಪರಂಪರೆ ಕುರಿತು ಸೃಜನಾತ್ಮಕ ಚಿಂತನೆ ಬೆಳೆಯಲಿಲ್ಲ. ಈ ಪಂಡಿತರು ತೊಲ್ಕಪ್ಪಿಯದಲ್ಲಿ ಕಾದಂಬರಿ ಇದೆ, ಸಣ್ಣ ಕತೆ ಇದೆ ಎಂದುಕೊಂಡು ಹೊಸ ಬಗೆಯ ಆಲೋಚನಾ ಕ್ರಮಕ್ಕೆ ಬೆನ್ನು ಹಾಕಿ ವಿಶ್ವವಿದ್ಯಾಲಯಗಳ ದೊಡ್ಡ ಕಟ್ಟಡಗಳಲ್ಲಿ ಉಳಿದುಬಿಟ್ಟಿದ್ದಾರೆ.

# ಟಿಪ್ಪಣಿಗಳು

## "ರತ್ನನ ಪದಗಳು", ಕೈಲಾಸಂ, ಪೂರ್ಣಿಮಾ, ತರಂಗ...ಇತ್ಯಾದಿ

ಚಿ. ಶ್ರೀನಿವಾಸರಾಜು

18 ಡಿಸೆಂಬರ್ 1983ರ 'ತರಂಗ' ವಾರಪತ್ರಿಕೆಯಲ್ಲಿ ಶ್ರೀಮತಿ ಗುಡಿಬಂಡೆ ಪೂರ್ಣಿಮಾ ಅವರು 'ರತ್ನನ ಪದಗಳು ಕರ್ತೃ ರಾಜರತ್ನಂ ಅಲ್ಲ ; ಕೈಲಾಸಂ' ಎಂಬ ಕಿರು 'ಸಂಶೋಧನಾ' ಲೇಖನವನ್ನು ಪ್ರಕಟಿಸಿದ್ದರು. ಅದನ್ನು ಓದಿ, ಹೆಚ್ಚಿನ ವಿಷಯವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಅವರಿಗೇ ಒಂದು ಪತ್ರ ಬರೆದೆ. ಅವರು ಕೂಡಲೇ ಕೊಟ್ಟ ಉತ್ತರದಲ್ಲಿ ಹೆಚ್ಚಿನ ಮಾಹಿತಿಯನ್ನೇನೂ ಕೊಡದೆ ನನ್ನನ್ನೇ 'ಯೋಚಿಸಿ' ಎಂದು ಸೂಚಿಸಿದ್ದರು. ಈ 'ಸಂಶೋಧನೆ'ಗೆ ಉತ್ತರವಾಗಿ 21 ಮತ್ತು 28 ಡಿಸೆಂಬರ್ 1984ರ 'ತರಂಗ'ಗಳಲ್ಲಿ ರಾಜರತ್ನ ಮತ್ತು ಕೈಲಾಸಂ ಅವರುಗಳನ್ನು ಬಲ್ಲವರು, ನಿಜ ತಿಳಿದವರು ಸಾಕ್ಷಿ, ಆಧಾರಗಳಿಂದ "**ರತ್ನನ ಪದಗಳು ಬರೆದದ್ದು 'ರಾಜರತ್ನಂ ಎಂಬುದು ನಿರ್ವಿವಾದ'** ಎಂಬುದನ್ನು ಸಾಬೀತುಗೊಳಿಸಿದ್ದಾರೆ. ಒಂದು ರೀತಿಯಲ್ಲಿ ಇದು ಮುಗಿದ ಕತೆ. ಆದರೆ ಈ ಗೊಂದಲಕ್ಕೆ ಕಾರಣ ಯಾರು ?

'ತರಂಗ' ಲಕ್ಷದ ಗಡಿಯನ್ನು ದಾಟಿ ಜನಪ್ರಿಯವಾಗಿದೆ. ಇಂತಹ ಪತ್ರಿಕೆಗೆ ಒಂದು ದಿನಕ್ಕೆ ಸಾವಿರಾರು ಬರಹಗಳು ಬರುತ್ತವೆ. ಅವುಗಳಲ್ಲಿ ಬಹುಪಾಲು ಕಸದ ಬುಟ್ಟಿಗೆ ಯೋಗ್ಯವಾಗಿರುತ್ತವೆ. ನಾಡು-ನುಡಿಯ ಸಾಂಸ್ಕೃತಿಕ ಜವಾಬ್ದಾರಿಯಿರುವ ಒಂದು ಜನಪ್ರಿಯ ಪತ್ರಿಕೆಗೆ ತಾನು ಪ್ರಕಟಿಸುವ ಬರಹಗಳ ಬಗ್ಗೆ ಜನಪರವಾದ, ಸರಿಯಾದ ತಿಳುವಳಿಕೆ ಇರಬೇಕಾಗುತ್ತದೆ. ಕಸದ ಬುಟ್ಟಿಗೆ ಹೋಗಬೇಕಾದ ಬರಹವನ್ನು ಕಲಾತ್ಮಕವಾಗಿ ಪ್ರಕಟಿಸಿದರೆ ಪತ್ರಿಕೆಯ ಅಭಿರುಚಿಯನ್ನೆ ಶಂಕಿಸಬೇಕಾಗುತ್ತದೆ. 'ಮುಕ್ತವಾಗಿದ್ದೇವೆ' 'ನಡೆಸಿದ್ದು ಸಂವಾದ' 'ಶಾಕ್ ಟ್ರೀಟ್‌ಮೆಂಟ್' ಎಂಬ ನೆಪದಲ್ಲಿ ನಾಡು ನುಡಿಗೆ ಗೌರವ ತಂದವರಿಗೆ ಅಪಚಾರ ಮಾಡುವುದು ಸರಿಯಲ್ಲ. ಈ ರೀತಿಯ 'ಶಾಕ್ ಟ್ರೀಟ್‌ಮೆಂಟ್'ನಿಂದಲೇ ಜನಪ್ರಿಯ ರಾಜರತ್ನಂ ಅವರಿಗೆ ಪ್ರಸಿದ್ಧಿ ತಂದು ಕೊಡಬೇಕಿರಲಿಲ್ಲ. ನಮ್ಮ 'ತರಂಗ' ಪತ್ರಿಕೆಯು ಘನತೆಗೆ ಕುಂದು ತಂದುಕೊಳ್ಳುವುದು ಸರಿಯಲ್ಲ. ತೀವ್ರ ಭಿನ್ನಾಭಿಪ್ರಾಯವಿರುವ ಬರಹ ಸಾಕಷ್ಟು ಆಧಾರಗಳಿಲ್ಲದೆ ಬಂದಾಗ, ಅದನ್ನು ಚೆನ್ನಾಗಿ ತಿಳಿದ ನಾಲ್ಕು ಜನ ಪರಿಣಿತರ ಸಲಹೆ-ಸಹಕಾರ ಪಡೆದು

ಪ್ರಕಟಿಸಬಹುದಿತ್ತು. ಅಥವಾ ಕಸದ ಬುಟ್ಟಿಗೆ ಎಸೆಯಬಹುದಿತ್ತು. ಈ ಪ್ರಕಟಣೆಯಿಂದ ಶ್ರೀಮತಿ ಗುಡಿಬಂಡೆ ಪೂರ್ಣಿಮಾ ನಾಡು ನುಡಿ ಹಿರಿಯರಿಗೆ ಮಾಡಿರುವ ಅಪಮಾನಕ್ಕಿಂತ 'ತರಂಗ' ಮಾಡಿರುವ ಅಪಮಾನವೇ ಹೆಚ್ಚಿನದೆಂದು ನನ್ನ ಅನಿಸಿಕೆ. 'ಸಂವಾದಕ್ಕೆ ಪ್ರಚೋದನೆ ಕೊಡಲು' ಈ ರೀತಿಯ 'ಸಂಶೋಧನೆ'ಯನ್ನು ಪ್ರಕಟಿಸಬಾರದಿತ್ತು. ನಾಳೆ ಪ್ರಚೋದನೆಗಾಗಿ "ಮಂಕುತಿಮ್ಮನ ಕಗ್ಗ ಬರೆದಿದ್ದು ಮಂಕಪ್ಪ–ಡಿ.ವಿ.ಜಿಯಲ್ಲ" ಎಂದು ಯಾರಾದರು ಊಹೆಮಾಡಿದ್ದನ್ನು ಪ್ರಕಟಿಸಿದರೆ ಅದು ಪತ್ರಿಕೆಯ ತಪ್ಪಾಗುತ್ತದೆ. ಅದನ್ನು ಬರೆದವರಿಗೂ ವಿಷಯ ಗೊತ್ತಿರುವುದಿಲ್ಲ, ಪ್ರಕಟಿಸಿದವರಿಗೂ ಜವಾಬ್ದಾರಿ ಇರುವುದಿಲ್ಲ.

ರಾಜರತ್ನಂ 'ಸಾಹಿತ್ಯ ಪರಿಚಾರಿಕೆ' ಎಲ್ಲರಿಗೂ ತಿಳಿದಿದ್ದ ವಿಷಯ. ಅವರು ತಮ್ಮ ಪುಸ್ತಕಗಳ ಜೊತೆಗೆ, ಕೆಲವರ ಒಳ್ಳೆಯ ಪುಸ್ತಕಗಳ ಪ್ರಚಾರವನ್ನು, ಮಾರಾಟವನ್ನೂ ನಿರಂತರವಾಗಿ ಮಾಡುತ್ತಾ ಬಂದಿದ್ದರು. ಆದರೆ ಅವರು ನಿಧನರಾದ ಮೇಲೆ ಅವರ ಪುಸ್ತಕಗಳು ಓದುವವರಿಗೆ, ಕೊಳ್ಳುವವರಿಗೆ, ಪ್ರಕಟಿಸುವವರಿಗೆ ಸುಲಭವಾಗಿ ದೊರಕುತ್ತಿಲ್ಲ. ಇದಕ್ಕೆ ಯಾರು ಹೊಣೆ? ಲೇಖಕರ ಕೃತಿಗಳನ್ನು ಓದುಗರಿಂದ ದೂರ ಇಡುವುದು, ಅದನ್ನು ಸಿಕ್ಕದ ಹಾಗೆ ಮಾಡುವುದು, ಅನಂತರ ಪೇಚಾಡುವುದು ಅಪರಾಧ. ಸಾಹಿತಿ ಕೃತಿಯನ್ನು ರಚಿಸುವುದು ಜನ ಓದಲೆಂದು, ಬೆಳೆಯಲೆಂದು, ಸಂತೋಷಪಡಲೆಂದು; ಅದು ಕೆಲವರ ಆಸ್ತಿಯಾಗಲಿ ಎಂದಲ್ಲ ನನ್ನ ಭಾವನೆ. 'ಸಾಹಿತ್ಯ ಪರಿಚಾರಕ'ರಾಗಿದ್ದ ರಾಜರತ್ನಂ ಕೃತಿಗಳು ಒಂದೆರಡು ವರ್ಷಗಳಿಂದ, ಯಾವದೇ ಕಾರಣಕ್ಕಾಗಲಿ ಅಜ್ಞಾತವಾಗಿರುವುದು ಒಂದು ದುರಂತ. ಕೃತಿಗಾರನ, ಹಕ್ಕುದಾರನ ಆಯುಷ್ಯ ಅಲ್ಪ, ಕೃತಿಯ ಆಯುಷ್ಯ ಅನಂತ ಎಂಬುದನ್ನು ಅರಿತುಕೊಂಡರೆ ಒಳ್ಳೆಯದು.

---

# ದಾಖಲೆ

ದಿನಾಂಕ 4–12–1983ರ ಭಾನುವಾರ ಸಾಯಂಕಾಲ ಶಿವಮೊಗ್ಗೆಯಲ್ಲಿ 'ಸೃಷ್ಟಿ'ಯು ಆಶ್ರಯದಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ ಜರುಗಿದ ಅಹಿತಕರ ಘಟನೆಯ ಬಗ್ಗೆ ನಿಮ್ಮೆಲ್ಲರ ತೀವ್ರ ಗಮನ ಸೆಳೆಯಲು ಬರೆಯುತ್ತಿದ್ದೇವೆ.

'ಸೃಷ್ಟಿ' ಅರ್ಥಪೂರ್ಣ ಸಂವಾದ ಮತ್ತು ಗಂಭೀರ ಚಿಂತನೆಗಾಗಿ ಇರುವ ವೇದಿಕೆ. ಈವರೆಗೆ ವಿಚಾರಪೂರ್ಣ ಚರ್ಚೆಗಳನ್ನು ಮುಕ್ತ ಮತ್ತು ಗಂಭೀರ ರೀತಿಯಲ್ಲಿ ನಡೆಸಿಕೊಟ್ಟಿತು. ದಿನಾಂಕ 4–12–83ರ ಸಂಜೆ ಡಾ : ಪೋಲಂಕಿ ರಾಮಮೂರ್ತಿಯವರು ತಾವು ಬರೆದು, ಪ್ರಕಟಿಸಿದ 'ರಾಮಾಯಣದ ಸೀತಾಯಣ' ಲೇಖನವನ್ನು ಆಧರಿಸಿ ಮಾತನಾಡಿದರು. ಎಂದಿನಂತೆ ಮುಕ್ತ ಚರ್ಚೆಗೆ ಆಹ್ವಾನಿಸಿದಾಗ ಸದಸ್ಯರಲ್ಲದ; ದುರುದ್ದೇಶದಿಂದ ಬಂದ ಆರ್. ಎಸ್. ಎಸ್. ಗುಂಪು, ನಿಂದನೆಯನ್ನು ಆರಂಭಿಸಿ, ಚರ್ಚೆಯ ದಿಕ್ಕನ್ನು ಬದಲಿಸಿತು. ಇಷ್ಟು ಮಾತ್ರವಲ್ಲದೆ ಭಾಷಣಕಾರರ ಮೇಲೆ ಅಶ್ಲೀಲ ಮಾತುಗಳನ್ನು ಉಪಯೋಗಿಸಿ, ಅವರನ್ನು ಕೊನೆಗೆ ಮುತ್ತಿಗೆ ಹಾಕಿ ಹಲ್ಲೆ ಮಾಡುವ ಪ್ರಯತ್ನಕ್ಕೂ ಇಳಿದು ಬರ್ಬರತೆಯನ್ನು ತೋರಿತು.

ಇದೇ ಸಂದರ್ಭದಲ್ಲಿ ಕೇವಲ ಶ್ರೋತೃಗಳಾಗಿ ಬಂದಿದ್ದ ಶ್ರೀಮತಿ ಪ್ರಭಾ ಮತ್ತು ಶ್ರೀ ಸತ್ಯನಾರಾಯಣರಾವ್ ಅಣತಿ ಅವರನ್ನು ದುರುದ್ದೇಶದಿಂದ ಪ್ರೇರಿತ ಗುಂಪು ಅನಾವಶ್ಯಕವಾಗಿ ಹೊಡೆಯಿತು. ಅಣತಿ ಮತ್ತು ಪ್ರಭಾ ಅವರನ್ನು ಉಳಿಸಲು ಹೊರಟ ರಾಜು, ತೀರ್ಥಹಳ್ಳಿಯ ಧರ್ಮಯ್ಯ ಇನ್ನೂ ಅನೇಕರನ್ನು ಥಳಿಸಲಾಯಿತು.

ಸಭೆ ನಡೆಯುವಾಗ ಕೆಲವರು ಮಹಿಳೆಯರ ಮೇಲೆಯೂ ಸಣ್ಣ ಕಲ್ಲುಗಳನ್ನು ಎಸೆದು ಗೊಂದಲಕ್ಕೀಡು ಮಾಡಿದರು. ಸಭೆ ಗೊಂದಲದಲ್ಲಿ ಅಂತ್ಯಗೊಂಡಾಗ ಅವಾಚ್ಯ ಶಬ್ದಗಳನ್ನು ಧಾರಾಳವಾಗಿ ಬಳಸಲಾಯಿತು.

ಮುಕ್ತ ಚರ್ಚೆ ನಡೆಯಲು, ಹೊಸ ಆಲೋಚನೆ ಬೆಳೆಯಲು ಸಾಧ್ಯವಾಗದ ರೀತಿಯಲ್ಲಿ ಭೀತಿಯ ವಾತಾವರಣವನ್ನು ಶಿವಮೊಗ್ಗೆಯಲ್ಲಿ ಉಂಟುಮಾಡುವ ದೌರ್ಜನ್ಯದ ಸಂದರ್ಭಗಳು ಹೆಚ್ಚುತ್ತಿವೆ. ಎಲ್ಲ ಪ್ರಗತಿಪರರು ಈ ಬಗ್ಗೆ ಗಂಭೀರವಾಗಿ ಆಲೋಚಿಸಿ; ಸಾಧ್ಯವಾದ ಎಲ್ಲಾ ರೀತಿಯಲ್ಲೂ ಪ್ರತಿಭಟಿಸುವ ತುರ್ತು ಸಂದರ್ಭವಿದು.

ಈ ಹಲ್ಲೆ ಚಿಂತನಶೀಲತೆಯನ್ನು ಹತ್ತಿಕ್ಕುವ ನೇರ ಪ್ರಯತ್ನ. ಈ ಬಗ್ಗೆ ಎಲ್ಲರೂ ಎಚ್ಚೆತ್ತು ಪ್ರತಿಭಟಿಸಬೇಕಾಗಿರುವುದು ಅನಿವಾರ್ಯ.

'ಸೃಷ್ಟಿ'
ಶಿವಮೊಗ್ಗ

---

'ಅಂಕಣ'ಕ್ಕೆ ಬಂದಿದ್ದನ್ನು ಇಲ್ಲಿ ಪ್ರಕಟಿಸಿದ್ದೇವೆ.

# ಹೊಸ ದಿಗಂತಗಳತ್ತ ಮುನ್ನಡೆ

## ಕರ್ನಾಟಕ ರಾಜ್ಯೋತ್ಸವಕ್ಕೊಂದು ಹೊಸದಿಕ್ಕು

ಕರ್ನಾಟಕ ಜನತೆಯ ಆದರ್ಶ, ಆದೇಶಗಳಿಗೆ ಅನುಸಾರವಾಗಿ· ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸಮಗ್ರ ಸುಧಾರಣೆ ಮಾಡಿ, ಜನಜೀವನದಲ್ಲಿ ಉನ್ನತ ಮೌಲ್ಯಗಳ ಪ್ರತಿಷ್ಠಾಪನೆಗೆ, ರಾಜ್ಯ ಸರ್ಕಾರ ನಿಷ್ಠಾವಂತ, ನಿರಂತರ ಯತ್ನ ನಡೆಸಿದೆ.

ಜನಕೋಟಿ ಇರಿಸಿರುವ ವಿಶ್ವಾಸದ ಪ್ರತೀಕ—ಈ ಸಾಧನೆಗಳ ಸಾಲು .

ಸ್ವಚ್ಛ ನಿರಾಡಂಬರ ಆಡಳಿತ· ಪಕ್ಷಾಂತರ ಪಿಡುಗಿನ ನಿವಾರಣೆಗೆ ಮಸೂದೆ ಭ್ರಷ್ಟಾಚಾರ ಮೂಲೋತ್ಪಾಟನೆಗೆ 'ಲೋಕ ಆಯುಕ್ತ' ರಚನೆ ಸಾರ್ವಜನಿಕ ಕುಂದು ಕೊರತೆಗಳ ಶೀಘ್ರ ನಿವಾರಣೆಗೆ ಪ್ರತ್ಯೇಕ ಸಚಿವ ಶಾಖೆ.

ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡದ ಬಳಕೆ—ಅದಕ್ಕಾಗಿ ಕಾವಲು ಸಮಿತಿ ರಚನೆ. ಶಾಲೆಗಳಲ್ಲಿ ಕನ್ನಡ ಕಲಿಕೆ ಕಡ್ಡಾಯ.

ನಿಜವಾದ ಆಡಳಿತ ವಿಕೇಂದ್ರೀಕರಣಕ್ಕೆ ಜಿಲ್ಲಾ ಪರಿಷತ್ತು ಮಂಡಲ ಪಂಚಾಯತಿ ಮತ್ತು ನ್ಯಾಯ ಪಂಚಾಯಿತಿಗಳ ಸ್ಥಾಪನೆಗೆ ವಿಧೇಯಕ. ಮಾತುಕೊಟ್ಟಂತೆ ನಗರಸಭೆ ಪುರಸಭೆಗಳಿಗೆ ಚುನಾವಣೆ ನಡೆಸಲಾಗಿದೆ. ಅದಕ್ಕಾಗಿ ಮತದಾರರ ವಯೋಮಿತಿ 18 ಕ್ಕೆ ಇಳಿಸಿರುವುದೇ ಅಲ್ಲದೆ ಈ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗ ಶೇಕಡ 20 ರಷ್ಟು ಸ್ಥಾನ ಮೀಸಲು.

ಹಿಂದುಳಿದ ವರ್ಗದವರ 'ಏಳಿಗೆ ಹಾಗೂ ಇದೇ ಪ್ರಥಮವಾಗಿ ಅಲ್ಪ ಸಂಖ್ಯಾತರ ಹಿತ ರಕ್ಷಣೆ ಪರಿಣಾಮಕಾರಿ ಸಲಹೆ ಮಾಡಲು ಎರಡು ಆಯೋಗ ರಚನೆ. ಕೋಮುವಾರು ಸೌಹಾರ್ದ ಸಾಧನೆಗೆ ತಾಲ್ಲೂಕು ಮಟ್ಟದ ಮಂಡಲಿಗಳ ಸ್ಥಾಪನೆ.

ಪ್ರತಿಭಾವಂತ ಹರಿಜನ—ಗಿರಿಜನ ಯುವಕ—ಯುವತಿಯರಿಗೆ ಸರ್ಕಾರದಲ್ಲಿ ಉನ್ನತ ಅಧಿಕಾರಿ ಮಟ್ಟದಲ್ಲಿ ನೇರ ನೇಮಕ ಮಾಡುವ ಅವಕಾಶ ಕಲ್ಪಿಸಲಾಗಿದೆ. ಬಹುಕಾಲದಿಂದ ಆಗದೇ ಇರುವ ಶಿಕ್ಷಣ ವ್ಯವಸ್ಥೆಯ ಸುಧಾಹರಣೆಗೆ ಸಮಗ್ರ ಮಸೂದೆಯೊಂದು ರಚಿತವಾಗಿದೆ.

ಕೇಂದ್ರ ಹಾಗೂ ರಾಜ್ಯ ಸಂಬಂಧಗಳ ಬಗ್ಗೆ ಹೊಸ ಚಿಂತನೆ. ಆಡಳಿತದಲ್ಲಿ ಹೊಸ ವಿಚಾರ ಅಳವಡಿಸಿಕೊಳ್ಳಲು ಆರ್ಥಿಕ ಹಾಗೂ ಯೋಜನಾ ಮಂಡಲಿಗಳ ರಚನೆ.

ಕೈಗಾರಿಕಾ ಬೆಳವಣಿಗೆಗೆ ಪ್ರೇರಕವಾದ ಹೊಸ ಧೋರಣೆ. ಉದ್ಯೋಗಾವಕಾಶ ಹೆಚ್ಚಿರುವ ಕೈಗಾರಿಕೆಗಳ ಸ್ಥಾಪನೆ; ಕೈಗಾರಿಕೆ ಸ್ಥಾಪನೆಗೆ ಎಲ್ಲ ಸೌಕರ್ಯಗಳೂ ಒಂದೇ ಕಡೆ ದೊರೆಯುವ ಜಿಲ್ಲಾಮಟ್ಟದ ವ್ಯವಸ್ಥೆ. ತಿಂಗಳಿಗೆ 1000 ಹೊಸ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಕಾರ್ಯಕ್ರಮ.

ಪ್ರತಿ ಹಳ್ಳಿಯಲ್ಲಿ ಐದು ಬಡ ಕುಟುಂಬಗಳ ಏಳಿಗೆ ಸಾಧಿಸುವ 'ಅಂತ್ಯೋದಯ' ಯೋಜನೆ.

ರೈತರಿಗೆ ಈವರೆಗೆ ಐವತ್ತು ಕೋಟಿ ರೂಪಾಯಿ ರಿಯಾಯಿತಿ ಸೌಕರ್ಯ

13,500 ಕೊಳವೆ ಬಾವಿಗಳನ್ನು ತೋಡಲಾಗಿದೆ. 10,000 ಗ್ರಾಮಗಳಿಗೆ ಕುಡಿಯುವ ನೀರಿನ ಸೌಲಭ್ಯ 40,000 ಜನಸಂಖ್ಯೆ ಇರುವ ಊರುಗಳಲ್ಲೆಲ್ಲ ಅನೌಪಚಾರಿಕ ಪಡಿತರ ವ್ಯವಸ್ಥೆಯ ವಿಸ್ತರಣೆ.

ವರದಕ್ಷಿಣೆ ಸಾವು ನೋವು ಪ್ರಕರಣಗಳನ್ನು ಸಿ.ಓ.ಡಿ. ತನಿಖೆಗೆ ಒಪ್ಪಿಸಲಾಗುತ್ತದೆ

ವೃದ್ಧರು ಹಾಗೂ ಅಂಗವಿಕಲರ ಪರಿಹಾರ ವೇತನ ಹೆಚ್ಚಿಸಲಾಗದೆ.

ಜನಮನಕ್ಕೆ ಸ್ಪಂದಿಸುವ ಸರ್ಕಾರ—ಕರ್ನಾಟಕ ಸರ್ಕಾರ.

## ವಾರ್ತಾ ಮತ್ತು ಪ್ರಚಾರ ಇಲಾಖೆ

### ಕರ್ನಾಟಕ ಸರ್ಕಾರ

No. MAG (2) PQ3 DECL 322/1979-80
ANKANA (Kannada Bi-monthly) November-December 1983

# 'ಅಂಕಣ' ಪ್ರಕಾಶನ

ಬೆಂಗಳೂರು-560003

## ರಾಘವೇಂದ್ರ ಖಾಸನೀಸರ ಕಥೆಗಳು

ಬೆಲೆ : ಹದಿನೈದು ರೂಪಾಯಿ

### ವಿಶೇಷ ರಿಯಾಯಿತಿ

ಮುಂಗಡವಾಗಿ ಹತ್ತು ರೂಪಾಯಿಗಳನ್ನು ಎಂ.ಒ / ಚೆಕ್ ರೂಪದಲ್ಲಿ
(ಹೊರಗಿನವರು ಎರಡು ರೂಪಾಯಿ ಬ್ಯಾಂಕ್ ಕಮಿಷನ್ ಸೇರಿಸಿ)
'ಅಂಕಣ'ದ ವಿಳಾಸಕ್ಕೆ ಹಣವನ್ನು ಕಳುಹಿಸುವವರಿಗೆ ಪ್ರತಿಗಳನ್ನು
ಕಳುಹಿಸಲಾಗುವುದು.

'ಅಂಕಣ'
8, 'ಚಿರಂಜೀವಿ'
ಹಳೇ ಈಜುಕೊಳ ರಸ್ತೆ,
ಕೋದಂಡರಾಮಪುರ,
ಬೆಂಗಳೂರು - 560 003.

Published by C. Srinivasaraju 8 'Chiranjeevi' Old Swimmingpool Road
Kodandarampura, Bangalore-560 003, Printed at ILA Printers, 153,
4th Main, 8th Cross, Bangalore-560 018. Editor A. R. Nirupama.